

# ಸಪ್ತಗಿರಿ

ಬೆಲೆ : ರೂ.

ಆಗಸ್ಟ್ 1993



ತಿರುಮಲೆ ತಿರುಪತಿ ದೇವಸ್ಥಾನಗಳ ಸಚಿತ್ರ ಮಾಸಪತ್ರಿಕೆ

# Sri Venkateswara Temple, Tirumala

## Temple Timings



### SATURDAYS, SUNDAYS, MONDAYS and TUESDAYS

| | |
|---|---|
| 3-00 A.M. to 3-30 A.M. | Suprabhatam |
| 3-30 A.M. to 3-45 A.M. | Suddhi etc. |
| 3-45 A.M. to 4-30 A.M. | Thomala Seva (Arjitham Rs. 100/- per person) |
| 4-30 A.M. to 4-45 A.M. | Koluvu and Panchanga Sravanam |
| 4-45 A.M. to 5-30 A.M. | I st Archana i.e., Sahasranama Archana (Arjitham Rs. 100/- per person) |
| 5-30 A.M. to 6-00 A.M. | I st Bell, Bali and Sattumora |
| 6-00 A.M. to 11-00 A.M. | *Sarvadarsanam* |
| 11-00 A.M. to 12-00 Noon | Suddhi, Second Archana (Ekantam) and Second Bell etc. |
| 12-00 Noon to 7-00 P.M. | *Sarvadarsanam* |
| 7-00 P.M. to 8-00 P.M. | Suddhi, Night Kainkaryams (Ekantam) and Night Bell |
| 8-00 P.M. to 10-00 P.M. | *Sarvadarsanam* |
| 10-00 P.M. to 10-30 P.M. | Suddhi |
| 10-30 P.M. Depending on the closing of Sarvadarsanam | Ekanta Seva (Arjitham Rs. 50/- per person) |

### II. On WEDNESDAYS

(SPECIAL SEVA S.K. ABHISHEKAM)

| | |
|---|---|
| 3-00 A.M. to 3-30 A.M. | Suprabhatam |
| 3-30 A.M. to 3-45 A.M. | Suddhi etc. |
| 3-45 A.M. to 4-30 A.M. | Thomala Seva (Arjitham Rs. 100/- per person) |
| 4-30 A.M. to 4-45 A.M. | Koluvu and Panchanga Sravanam |
| 4-45 A.M. to 5-30 A.M. | I st Archana Sahasranama Archana (Arjitham Rs. 100/- per person) |
| 5-30 A.M. to 6-00 A.M. | I st Bell, Bali and Sattumora and preparations for S.K. Abhishekam etc. |
| 6-00 A.M. to 8-00 A.M. | Arjitha S.K. Abhishekam, Suddhi, II nd Archana (Ekantam) and bell etc. |
| 8-00 A.M. to 7-00 P.M. | *Sarvadarsanam* |
| 7-00 P.M. to 8-00 P.M. | Suddhi, Night Kainkaryams (Ekantam) and Night Bell etc. |
| 8-00 P.M. to 10-00 P.M. | *Sarvadarsanam* |
| 10-00 P.M. to 10-30 P.M. | Suddhi |
| 10-30 P.M. Depending on the closing of Sarvadarsanam | Ekantha Seva (Arjitham Rs. 50/- per person) |

### III. ON THURSDAYS

(SPECIAL SEVAS : TIRUPPAVADA, POOLANGI SEVA)

| | |
|---|---|
| 3-00 A.M. to 3-30 A.M. | Suprabhatam |
| 3-30 A.M. to 3-45 A.M. | Suddhi etc. |
| 3-45 A.M. to 4-30 A.M. | Thomala Seva (Arjitham Rs. 100/- per person) |
| 4-30 A.M. to 4-45 A.M. | Koluvu and Panchanga Sravanam inside Bangaruvakili |
| 4-45 A.M. to 5-30 A.M. | I st Archana Sahasranama Archana (Arjitham Rs. 100/- per person) |
| 5-30 A.M. to 6-00 A.M. | I st Bell, Bali and Sattumora |
| 6-00 A.M. to 8-00 A.M. | Sallimpu, II nd Archana (Ekantam), Tiruppavada Alankaram, Bell etc. |
| 8-00 A.M. to 6-00 P.M. | *Sarvadarsanam* |
| 6-00 P.M. to 8-00 P.M. | Pedda Suddhi, Night Kainkaryams, Poolangi Samarpana and Night Bell etc. |
| 8-00 P.M. to 10-00 P.M. | Poolangi *Sarvadarsanam* |
| 10-00 P.M. to 10-30 P.M. | Suddhi |
| 10-30 P.M. Depending on the closing of Sarvadarsanam | Ekantha Seva (Arjitham Rs. 50/- per person) |

### IV. ON FRIDAYS

(SPECIAL SEVA : ABHISHEKAM)

| | |
|---|---|
| 3-00 A.M. to 3-30 A.M. | Suprabhatam |
| 3-30 A.M. to 5-00 A.M. | Sallimpu, Suddhi, Nityakatla Kainkaryams, Morning I Bell and preparations for Abhishekam etc. |
| 4-30 A.M. to 6-00 A.M. | Abhishekam |
| 6-00 A.M. to 7-00 A.M. | Samarpana etc |
| 7-00 A.M. to 8-00 A.M. | Thomala Seva and Archana (Arjitham Rs. 200/-) |
| 8-00 A.M. to 9-00 A.M. | II nd Bell, Bali and Sattumora etc. |
| 9-00 A.M. to 8-30 P.M. | *Sarvadarsanam* |
| 8-30 P.M. to 9-30 P.M. | Suddhi, Night Kainkaryams and Bell etc. |
| 9-30 P.M. to 10-00 P.M. | *Sarvadarsanam* |
| 10-00 P.M. to 10-30 P.M. | Suddhi |
| 10-30 P.M. Depending on the closing of Sarvadarsanam. | Ekantha Seva (Arjitham Rs. 50/- per person) |

Note:- 12-00 Noon to 7-00 P M Circar and Arjitham: Kalyanotsavam, Brahmotsavam, Unjalseva etc.




ನೀನಿರುಳೆಲ್ಲದ್ದಿ ಹೇಳಯ್ಯ
ಶ್ರೀನಿವಾಸ ಮೂರುತಿ ಗೋವಳರಾಯ ||ಪ||

ಪಾಲಸಾಗರದಿ ಹಾವಿನ ಮೇಲೆ ತಳಿ
ರಾಲದೆಲೆಯ ಮೇಲೆ ಯಶೋದೆಯ
ತೋಳಿನ ಮೇಲೆ ಗೋಪಿಯರಲಿ ಕ್ರತು
ಶಾಲೆಯೊಳರಸಿ ನೋಡಿದರಿಲ್ಲ ||೧||

ಕಡೆವಲ್ಲಿ ತುರುವಿಂಡುಗಳಲ್ಲಿ ಸತ್ಯ
ನುಡಿವಲ್ಲಿ ಎಡೆಗಾಣಿಸದಲ್ಲಿ
ಮಡದಿ ರುಕ್ಮಿಣಿ ಜಾಂಬವತಿಯರಲ್ಲಿ ನಿ
ನ್ನಡಿಗಳರಸಿ ನೋಡಿದರಿಲ್ಲ ||೨||

ಏಕಾದಶಿಯ ಜಾಗರದಲ್ಲಿ ಪುಣ್ಯ
ಲೋಕಪಾವನ ಭಾಗವತರಲ್ಲಿ
ವ್ಯಾಖ್ಯಾನ ತೆಗೆದು ನೋಡಿದರಿಲ್ಲ ಜಗ
ದೇಕ ಪುರಂದರ ವಿಠಲ ||೩||

---ಶ್ರೀ ಪುರಂದರದಾಸರು.



ಸಂದರ್ಶಿಸಿ. ಆನಂದಿಸಿ.

# ಶ್ರೀ ವೆಂಕಟೇಶ್ವರಸ್ವಾಮಿ ದೇವಾಲಯ
# ತಿರುಮಲೆ





# ವಾರ್ಷಿಕ ಬ್ರಹ್ಮೋತ್ಸವಗಳು

17--9--93 ರಿಂದ 26--9--93 ವರೆಗೆ

## ಕಾರ್ಯಕ್ರಮ ವಿವರ

| ದಿನಾಂಕ | ವಾರ | ಬೆಳಗ್ಗೆ | ಸಂಜೆ |
|---|---|---|---|
| 17--9--93 | ಶುಕ್ರವಾರ | ---- | ಅಂಕುರಾರ್ಪಣೆ. |
| 18--9--93 | ಶನಿವಾರ | ಧ್ವಜಾರೋಹಣ | ದೊಡ್ಡ ಶೇಷವಾಹನ. |
| 19--9--93 | ಭಾನುವಾರ | ಚಿಕ್ಕ ಶೇಷವಾಹನ | ಹಂಸವಾಹನ. |
| 20--9--93 | ಸೋಮವಾರ | ಸಿಂಹವಾಹನ | ಮುತ್ತಿನ ಚಪ್ಪರವಾಹನ. |
| 21--9--93 | ಮಂಗಳವಾರ | ಕಲ್ಪವೃಕ್ಷವಾಹನ | ಸರ್ವಭೂಪಾಲವಾಹನ. |
| 22--9--93 | ಬುಧವಾರ | ಪಲ್ಲಕ್ಕಿಯಲ್ಲಿ ಮೋಹಿನೀ ಅವತಾರ | ಮಕರಕಂಠಿ ಲಕ್ಷ್ಮೀಹಾರಾದ್ಯಾಭರಣ ಸಹಿತ ಗರುಡಸೇವೆ. |
| 23--9--93 | ಗುರುವಾರ | ಹನುಮಂತ ವಾಹನ<br>ಸಂಜೆ -- ವಸಂತೋತ್ಸವ | ಗಜವಾಹನ. |
| 24--9--93 | ಶುಕ್ರವಾರ | ಸೂರ್ಯಪ್ರಭವಾಹನ | ಚಂದ್ರಪ್ರಭವಾಹನ. |
| 25--9--93 | ಶನಿವಾರ | ರಥೋತ್ಸವ | ಅಶ್ವವಾಹನ. |
| 26--9--93 | ಭಾನುವಾರ | ಚಕ್ರಸ್ನಾನ | ಧ್ವಜಾವರೋಹಣ. |

ಸೂಚನೆ: ಬ್ರಹ್ಮೋತ್ಸವದ ದಿನಗಳಲ್ಲಿ ಪ್ರತಿದಿನವೂ ಸಾಂಸ್ಕೃತಿಕ ಕಾರ್ಯಕ್ರಮಗಳುಂಟು. ಹೆಚ್ಚಿನ ವಿವರಗಳಿಗಾಗಿ ತಮ್ಮ ಬಳಿಯ ತಿ. ತಿ. ದೇವಸ್ಥಾನಗಳ ವಿಚಾರಣಾಕೇಂದ್ರದಲ್ಲಿ ಕೇಳಿ ತಿಳಿಯಿರಿ.

ನೀವೂ ಬನ್ನಿ ತಿ. ತಿ. ದೇ. ನಿಮ್ಮವರನ್ನೂ ಕರೆತನ್ನಿ





ಲೇಖನ ಜಾಹೀರಾತುಗಳಿಗೆ
ಮಿಕ್ಕವಿವರಗಳಿಗೆ
ಸಂಪಾದಕರು,
ತಿರುಮಲೆ ತಿರುಪತಿ ದೇವಸ್ಥಾನಗಳು,
ತಿರುಪತಿ.

ಸಪ್ತಗಿರಿಯ ಎಲ್ಲ ಭಾಷೆಯ ಪ್ರತಿಗಳೂ
ಎಲ್ಲ ತಿ.ತಿ.ದೇ. ವಿಚಾರಣಾಕೇಂದ್ರಗಳಲ್ಲಿ
ದೊರೆಯುವುವು.

**ಬಿಡಿ ಪ್ರತಿ ೨--೦೦**

**ವಾರ್ಷಿಕ ಚಂದಾ ೨೪--೦೦**

ಸಪ್ತಗಿರಿಯಲ್ಲಿ ಪ್ರಕಟವಾಗುವ ಲೇಖನಗಳಲ್ಲಿನ ಅಭಿಪ್ರಾಯಗಳು ಸಂಪಾದಕ ವರ್ಗದ, ಪತ್ರಿಕೆಯ, ಅಭಿಪ್ರಾಯಗಳೇ ಆಗಿರಬೇಕು ಎಂದಿಲ್ಲ. --ಸಂ||

**ಸಂಪುಟ - ೨೪ ]** **ಆಗಸ್ಟ್ ೧೯೯೩** **[ ಸಂಚಿಕೆ - ೩**

# ವಿಷಯಸೂಚಿ



ಮುಖಪುಟದಲ್ಲಿ : ವಟಪತ್ರಶಾಯಿ -- ಚಿತ್ರ -- ಕೆ. ಜಗದೀಶ್.

ಹಿಂಬದಿಯಲ್ಲಿ : ಕಾರ್ವೇಟಿನಗರದ ಶ್ರೀ ವೇಣುಗೋಪಾಲಸ್ವಾಮಿ ದೇವಾಲಯ.




ಕೃಷ್ಣದ್ವೈಪಾಯನ ವೇದವ್ಯಾಸರಿಗೆ ವಿಪರೀತ ಪ್ರತಿಭೆ. ವೇದಗಳ ವಿಭಜನೆಯೊಡನೆ ಅವರ ಕಾರ್ಯ ಮುಗಿಯಲಿಲ್ಲ. ಪಂಚಮ ವೇದವನ್ನೂ ತಿಳಿಯ ಹೇಳಿದರು. ಆದರೂ ಎಲ್ಲೋ ಕೊರೆ ಮನಸ್ಸಿನ ಮೂಲೆಯಲ್ಲಿ. ನಾರದರ ಮಾತಿನಂತೆ ಭಾಗವತವನ್ನು ಬರೆದು ತಮ್ಮ ಕೊರೆಯನ್ನು ನೀಗಿಸಿಕೊಂಡರಂತೆ. ಭಾರತ ಭಾಗವತಗಳೆರಡರಲ್ಲೂ ಸಿರಿಕೃಷ್ಣನಿದ್ದಾನೆ. ಆದರೂ ಅವನು ಅವುಗಳಲ್ಲಿನ ಒಂದು ಪಾತ್ರವಷ್ಟೆ, ಪೂರ್ಣ ಅವನೇ ಅಲ್ಲ. ಇತರರೂ ಇತರವೂ ಉಂಟು ಅವುಗಳಲ್ಲಿ. ಆದರೂ ಈ ಪಾತ್ರಧಾರಿಯಾದ ಸೂತ್ರಧಾರಿಯ ಮಹತ್ವ ದಿವ್ಯವಾದದ್ದು, ಭೂಮವಾದದ್ದು.

ಭಾಗವತದಲ್ಲಿ ಬರುವುದು ಕೇವಲ ಹರಿಮಹಿಮೆ. ಅವತಾರಗಳ ಅನುರಣನ. ಆದರೂ ಅಲ್ಲಿನ ಕೃಷ್ಣಾವತಾರ ಇಡೀ ಅವತಾರ ಶ್ರೇಣಿಯಲ್ಲೇ ಪ್ರತ್ಯೇಕವಾಗಿ ನಿಲ್ಲುವಂತದ್ದು. ದಶಮಸ್ಕಂದದಲ್ಲಿ ಭಗವಂತನ ಬಾಲಲೀಲೆಗೆ ಪ್ರಾಮುಖ್ಯ ಹೆಚ್ಚು. ಅವನ ಹುಟ್ಟು, ಬಾಲ್ಯ ಲೀಲಾ ವಿನೋದದ ಮಥುರಾ ಬೃಂದಾವನದ ಬಾಳು ಹೆಚ್ಚಿಗೆ ವ್ಯಾವೃತವಾಗಿದೆ. ಭಾರತದಲ್ಲಿ ಚಿತ್ರಿತವಾದಂತೆ ಅವನ ಧರ್ಮ ಸಂಸ್ಥಾಪನೆಯ ಯವ್ವನ ಇಲ್ಲಿಲ್ಲ. ಎಂದರೆ ಭಾಗವತದಲ್ಲಿ ಬಾಲಕತನದ ಲೀಲಾವಿನೋದ ಒತ್ತುಪಡೆದರೆ ಭಾರತದಲ್ಲಿ ಧರ್ಮಸಂಸ್ಥಾಪನೆಯ ಆದರ್ಶಪರ ಯವ್ವನ ಪ್ರೌಢಿಮೆ ಒತ್ತುಪಡೆಯುತ್ತದೆ.

ಹೀಗೆಂದಾಗ ಭಾಗವತದಲ್ಲಿ ಧರ್ಮಸಂಸ್ಥಾಪನೆಯ ಆದರ್ಶವಿಲ್ಲ ಎನ್ನುವಂತಿಲ್ಲ. ಇಲ್ಲಿಲ್ಲದ್ದು ಬೇರೆಲ್ಲೂ ಇಲ್ಲವೆಂಬ ಪ್ರಶಸ್ತಿ ಪಡೆದ ಭಾರತವಲ್ಲಿ ಬಾಲಲೀಲಾ ವಿನೋದಿ ಭಗವಂತನಿಲ್ಲವೆಂಬುದೂ ಅಲ್ಲ. ಬೇರೆ ಬೇರೆ ಒತ್ತುಗಳನ್ನು ಗುರುತಿಸುವುದಷ್ಟೆ ಇಲ್ಲಿನ ಉದ್ದೇಶವಾಗಿ, ಎರಡೂ ಸ್ಥೂಲವಾಗಿಯೇ ಅರ್ಥವಾಗತಕ್ಕದ್ದು.

ಭಾರತದಲ್ಲಿ ಕೃಷ್ಣ ಮೊದಲಿಗೆ ಇಲ್ಲವಾದರೂ ಸಭಾಪರ್ವದಲ್ಲಿ ನೇರ ರಂಗ ಪ್ರವೇಶಮಾಡಿ ಉದ್ಯೋಗ ಪರ್ವದ ನಂತರ ತಾನೇ ರಂಗ ದಲ್ಲಿ ನಿಂತು ಕಥೆಯನ್ನು ನಡೆಸುತ್ತಾನೆ, ಧರ್ಮಕ್ಕೆ ಪಟ್ಟಕಟ್ಟುವವರೆಗೆ. ಎಲ್ಲ ಕಡೆಯೂ ಅವ ನಗುತ್ತಲೇ ನಡೆದುಕೊಂಡು ಇತರರನ್ನು ನಡೆಸುತ್ತಾನೆ. ಅಥವಾ ಧರ್ಮಸಂಸ್ಥಾಪನೆಯೂ ಒಂದು ಲೀಲಾವಿನೋದವೂ ಏನೊ ಆ ಮಹಾನುಭಾವನಿಗೆ. ಅದಕ್ಕಾಗಿ ಹಲವಾರು ಬಾರಿ ಗೆರೆಯಿಂದ ಆಚೆಗೆ ಆಡುವ ಆಟಗಾರನಂತೆ ಕಂಡುಬಂದರೂ ಒಟ್ಟು ನೋಟದಲ್ಲಿ ಅತ್ಯುತ್ತಮ ಮುತ್ಸದ್ದಿಯಂತೆ ಕಂಡುಬರುತ್ತಾನೆ. ಪಾಂಡವ ಪ್ರಾಣನೇ ಆದರೂ ಅಭಿಮನ್ಯುವನ್ನು ತಪ್ಪಿಸಿ ಕಲಿಯುಗಕ್ಕೆ ಗತಿ ಮಾಡಿಕೊಡುವುದು, ಜಯದ್ರಥ ವಧಾಪ್ರಸಂಗದಲ್ಲಿ ಸಾತ್ಯಕಿಯನ್ನುಳಿಸಿಕೊಳ್ಳಲು ಭೂರಿಶ್ರವನ ಮೇಲೆ ಅರ್ಜುನ ಬಾಣವನ್ನೆಸೆಯುವಂತೆ ಮಾಡುವುದು ಮುಖ್ಯವಾಗಿ ಜಯದ್ರಥನ ವಧೆಯಲ್ಲಿ ಆತನ ನಡಾವಳಿ, ಕರ್ಣನ ಬಗೆಗಿನ ಪ್ರೇಮ, ಭೇದ, ಎಲ್ಲವೂ ಧರ್ಮದ, ಧರ್ಮನ, ಒಳಿತಿಗೆ ಎಂಬುವ ಒರೆಗಲ್ಲಿನಲ್ಲಿ ಹೊಳೆಯುವ ಅಪರಂಜಿಯಾಗುತ್ತವೆ. ಇದನ್ನೆಲ್ಲವನ್ನೂ ಅಧರ್ಮವಿರುದ್ಧ ದ್ವೇಷಭಾವದಿಂದಲ್ಲದೆ, ಕರ್ತವ್ಯವೆನ್ನುವ ನಿಷ್ಠುರ ಭಾವದಿಂದಲ್ಲದೆ ಧರ್ಮಪರವೆನ್ನುವ ಸ್ನೇಹಭಾವದಿಂದಲೇ ಸಾಧಿಸಿದ್ದು ಒಂದು ಹಿರಿಮೆ.

ಭಾಗವತದ ಒಂದು ಭಾಗದಲ್ಲಿ ಬರುವ ಕೃಷ್ಣಕಥೆಯಲ್ಲಿ ಬಹುಭಾಗ ಬಾಲಲೀಲೆಯಾಗಿದೆ ಎಂದೆವು. ಇಡೀಭಾಗವತವೇ ಹರಿಗೆ ಲೀಲಾಭೂಮಿ. ಆದರೂ ಕೃಷ್ಣನ ಬಾಲಲೀಲೆಯಲ್ಲಿ ಧರ್ಮದ ಪರವಾದ ಲೀಲೆಯೇ ಹೆಚ್ಚು ಎಂಬುದನ್ನು ವಿವರಿಸಬೇಕಿಲ್ಲ. ಕಂಸ ಚಾಣೂರ ಮರ್ದನದಲ್ಲಿ, ಉಗ್ರಸೇನ ವಿಧೇಯತೆಯನ್ನು ತೋರುವಲ್ಲಿ, ಜರಾಸಂಧನಿಂದಾಗಿ ಊರು ಬಿಟ್ಟು ಓಡಿ ಹೋಗುವಲ್ಲಿ ಬಾಲಲೀಲೆಯೇನೂ ಇಲ್ಲ. ಧರ್ಮದ ಪರತೊಡಗಿಸಿಕೊಳ್ಳುವ ಪ್ರೌಢ ಮನವೇ ಕೆಲಸಮಾಡುತ್ತಿದೆ ಎಂಬುದನ್ನು ಗಮನಿಸಿದರೆ ಗೋಪಿಯರ ಭಾಗ್ಯವಾದ, ಗೋಪಾಲಕರ ಗೆಳೆಯನಾದ, ತಾಯಿಗೆ ಬಾಯಲ್ಲಿ ಜಗವನ್ನು ತೋರಿದ ಬಾಲಕೃಷ್ಣ ಬೆಳೆಯುತ್ತ ಬೆಳೆಯುತ್ತ ತನ್ನ ಆವರಣದಿಂದ ಬಾಲ್ಯದಿಂದ ಜಿಗಿದ ಆದರ್ಶ ಪ್ರಪಂಚಕ್ಕೆ ಎಂದು ಹೇಳಬಹುದು.

ಹೀಗಾಗಿ ಒಂದು ಬೆಳವಣಿಗೆ ಕಾಲಾನುಕ್ರಮವಾದದ್ದು-ರಚನಾಕ್ರಮದಲ್ಲಿ ಭಾರತ ಭಾಗವತವಾದರೂ ಕೃಷ್ಣನ ಪಾತ್ರದ ಬೆಳವಣಿಗೆ ಯಲ್ಲಿ-ಭಾಗವತ ಭಾರತವೆಂಬಂತೆ ತೋರಿಬಂದರೆ ಅಚ್ಚರಿಯಿಲ್ಲ. ಎರಡೂ ಒಂದೇ ಆಗಿ ಕರ್ಣಾಮೃತವಾಗುವಂತೆ ಮಾಡಿದ ಆ ಮಹಾಮುನಿ ವ್ಯಾಸರನ್ನೂ -- ಕೃಷ್ಣ ಎಂದೇ ಕರೆದರು. ಅವರನ್ನು ವಿಷ್ಣುರೂಪವೆಂದೂ ಹೇಳಿದರು. (ಕೃಷ್ಣನೇ ಹೇಳಿಲ್ಲವೇ ಮುನಿಗಳಲ್ಲಿ ನಾನು ವ್ಯಾಸ ಎಂಬುದಾಗಿ) -- ಆ ಧರ್ಮಸಂಸ್ಥಾಪಕ ಶ್ರೀಕೃಷ್ಣನನ್ನು -- ಬಾಲ ಲೀಲಾವಿನೋದಿಯನ್ನು ನೆನೆದು ನಮಸ್ಕರಿಸುವ.

||| ಕೃಷ್ಣಂ ವಂದೇ ಜಗದ್ಗುರುಂ |||

* * * * *

# ಕೃಷ್ಣಜನ್ಮಾಷ್ಟಮೀ ಸಂದೇಶ

ಅಕ್ರೂರ ಬಂದ. ಕೃಷ್ಣನ ಮಧುರೆಗೆ ಕರೆತಂದ. ಕಂಸ ಕೃಷ್ಣನ ಕೊಲ್ಲುವೆನೆಂದಿದ್ದ. ಕೃಷ್ಣನೇ ಕಂಸನ ಕೊಂದ. ಆ ಕೂಡಲೇ ತಂದೆ ತಾಯಂದಿರ ಬಳಿಗೆ ಬಂದು ಬಂಧನದಿಂದ ಬಿಡಿಸಿ ವಂದಿಸಿದ. ರಾಜ್ಯವನ್ನೆಲ್ಲ ಕಂಸನ ತಂದೆ ಉಗ್ರಸೇನನಿಗೆ ಹೊಂದಿಸಿದ. ಮಂದಿಗೆಲ್ಲಾ ನಂದನಕಂದನ ವ್ಯಾಪಾರ ಕಂಡು ಅಮಂದಾನಂದ.

ಇನ್ನೊಮ್ಮೆ ಜರಾಸಂಧನು ಬಂಧಿಸಿಟ್ಟ ರಾಜರುಗಳಿಂದ ಕಳುಹಿಸಿದ ದೂತ ಬಂದ. ಬಂಧನ ದಲ್ಲಿರುವ ರಾಜರನ್ನು ರಕ್ಷಿಸಬೇಕೆಂದು ಮೊರೆ ಹೊಕ್ಕ. ಶ್ರೀಕೃಷ್ಣ ಭೀಮನ ಮೂಲಕ ಜರಾಸಂಧನನ್ನು ಕೊಂದ. ಆ ಕೂಡಲೇ ಬಂಧಿಸಿಟ್ಟ ರಾಜರುಗಳನ್ನು ಬಿಡಿಸಿದ. ಜರಾಸಂಧನ ಮಗನಾದ ಸಹದೇವನಿಗೆ ಪಟ್ಟಕಟ್ಟಿ ಹಿಂದೆ ಬಂದ.

ಮತ್ತೊಮ್ಮೆ ನರಕಾಸುರ ಅದಿತಿದೇವ ಮಾತೆಯ ಕುಂಡಲಗಳನ್ನು ಅಪಹರಿಸಿದ್ದ. ರಾಜಕುಮಾರಿಯರನ್ನೆಲ್ಲಾ ರಾಶಿಹಾಕಿ ಇಟ್ಟಿದ್ದ. ದೇವಮುನಿಗಳು ಪ್ರಾರ್ಥಿಸಿದರು. ಸರಿ, ಶ್ರೀಕೃಷ್ಣ ಹೊರಟ. ನರಕನ ರಾಜಧಾನಿ ಪ್ರಾಗ್‌ಜೋತಿಷ ಪಟ್ಟಣಕ್ಕೆ ದಾಳಿಯಿಟ್ಟ. ನರಕ ಸಂಹಾರವಾಯಿತು. ನರಕನನ್ನು ನರಕಕ್ಕೆ ತುರುಕಿಸಿದ. ಆ ಕೂಡಲೇ ರಾಜಕುಮಾರಿಯರನ್ನು ಬಂಧನದಿಂದ ಬಿಡಿಸಿದ ಸಮಗ್ರ ರಾಜ್ಯವನ್ನು ನರಕಾಸುರನ ಮಗ ಭಗದತ್ತನಿಗೆ ಧಾರೆಯೆರೆದು ಕೃಷ್ಣ ಹಿಂತಿರುಗಿದ.

ಮಗದೊಮ್ಮೆ ಶ್ರೀಕೃಷ್ಣ ಕರವೀರಪುರಕ್ಕೆ ಬಂದಿದ್ದ. ಕೃಷ್ಣನ ಅಣ್ಣ ಸೃಗಾಲವಾಸುದೇವ ಶ್ರೀಕೃಷ್ಣನ ಮೇಲೆರಗಿ ಯುದ್ಧ ಭಿಕ್ಷೆ ಬೇಡಿದ. ಶ್ರೀಕೃಷ್ಣ ಅವನಿಗೆ ಬೇಕಾದ ಭಿಕ್ಷೆ ಹಾಕಿ ಯಮಪುರಿಗೆ ಕಳುಹಿಸಿಕೊಟ್ಟ. ಆ ಕೂಡಲೇ ಅವನ ಮಗ ಶಕ್ರದೇವನಿಗೆ ಸಿಂಹಾಸನದಲ್ಲಿ ಅಭಿಷೇಕ ಮಾಡಿ ಹಿಂದೆ ಬಂದ.

ಶ್ರೀಕೃಷ್ಣನ ಒಂದೊಂದು ಮಹಾತ್ಮೆಯೂ ಮಾತಾಡುತ್ತೆ. ಉಪದೇಶ ನೀಡುತ್ತೆ. ಇಲ್ಲೀಗ ಶ್ರೀಕೃಷ್ಣನ ಈ ಕಾರ್ಯಗಳು ನಾವು ಹೇಗಿರಬೇಕೆಂದು ಬೆರಳು ಮಾಡುತ್ತೆ. ಮನುಷ್ಯನು ಸ್ವಾರ್ಥ ಬಿಡಬೇಕೆಂದು ಹೇಳುತ್ತದೆ. ಕಂಸನನ್ನು ಧ್ವಂಸ ಮಾಡಿದ ಕೃಷ್ಣನಿಗೆ ಕಂಸನ ರಾಜ್ಯವನ್ನೂ ಹಾಗೆಯೇ ಜರಾಸಂಧ, ನರಕ, ಸೃಗಾಲ ವಾಸುದೇವನ ರಾಜ್ಯಗಳನ್ನೂ ಒಟ್ಟುಗೂಡಿಸಿ ಭೂಮಂಡಲದ ಅಖಂಡ ಅಧಿಪತಿಯಂತೆ ಮೆರೆಯಬಹುದಿತ್ತು. ಪ್ರತಿಯೊಂದು ರಾಜ್ಯಕ್ಕೂ ತನ್ನ ಮಕ್ಕಳನ್ನೇ ಮುಖ್ಯಮಂತ್ರಿ ಮಾಡಬಹುದಿತ್ತು. ಉನ್ನತ ಹುದ್ದೆಗಳಲ್ಲೆಲ್ಲಾ ತನ್ನ ಹತ್ತು ಲಕ್ಷ ಮಕ್ಕಳನ್ನು ತುಂಬಬಹುದಿತ್ತು. ಮಹಿಳೆಯರಿಗೆ ಸ್ಥಾನ ಮಾಸಲಿಟ್ಟಿದ್ದರೂ ಅದಕ್ಕೂ ಚಿಂತೆಯಿರಲಿಲ್ಲ. ಸಂಖ್ಯಾಬಲಕ್ಕೂ ಕಡಿಮೆಯಿರಲಿಲ್ಲ. ಹಾಗಿದ್ದರೂ ದೂರದ ಸಮುದ್ರದ ಮಧ್ಯೆ ಒಂದು ಸ್ಥಳ ಮಾಡಿ ವಾಸಿಸಿದ. ಆದರೂ ಜನ ಶ್ರೀಕೃಷ್ಣನನ್ನು ಗುರುತಿಸಿತು. ತಾನಾಗಿ ಬಂದು ಪೂಜಿಸಿತು. ಅಗ್ರಪೂಜೆಯನ್ನು ಅರ್ಪಿಸಿತು. ಸತ್ಯವು ಸಾಕ್ಷಾತ್ಕೃತವಾಯಿತು. ಇಲ್ಲಿ ಶ್ರೀಕೃಷ್ಣನು ಮಾನವ ಜನಾಂಗಕ್ಕೆ ಅಮೂಲ್ಯ ಆದರ್ಶವನ್ನು ಕೊಟ್ಟಿದ್ದಾನೆ. ಪ್ರಚಲಿತ ಪರಿಸ್ಥಿತಿಗೆ ಹೇಳಿ ಮಾಡಿಸಿದಂತಿದೆ ಈ ಪಾಠ.



ಇಂದು ಅಣ್ಣತಮ್ಮಂದಿರ ಕಷ್ಟಕಾಲದಲ್ಲಿ ನೆರವಾಗುತ್ತೇವೆ. ನಂತರ ಅವರ ಆಸ್ತಿಪಾಸ್ತಿಗಳನ್ನು ಕಿತ್ತು ಕಬಳಿಸುತ್ತೇವೆ. ಸ್ವಾರ್ಥದ ಕವಚ ತೊಟ್ಟೇ ಹೆಜ್ಜೆ ಇಡುತ್ತೇವೆ. ದೊಡ್ಡ ದೊಡ್ಡ ರಾಷ್ಟ್ರಗಳೂ ಚಿಕ್ಕ ರಾಷ್ಟ್ರಗಳೂ ನೆರವಿಗಾಗಿ ನುಸುಳುತ್ತವೆ. ನಂತರ ಕಾಲು ಕೀಳುವುದಿಲ್ಲ. ದೊಡ್ಡ ಮೀನನ್ನು ಸಣ್ಣ ಮೀನು, ಹೀಗೆ ಮನುಷ್ಯನು ಸರ್ವದಾ ಸ್ವಾರ್ಥದ ದೃಷ್ಟಿಯಿಂದ ಹೊಂಚು ಹಾಕುತ್ತಾ ಇರುತ್ತಾನೆ. ಶ್ರೀಕೃಷ್ಣನು ತಾನು ಮಾಡಿ ಆದರ್ಶವನ್ನು ಜಗತ್ತಿಗೆ ತೋರಿದ. ಶ್ರೀಕೃಷ್ಣನು ಎಂದೂ ತಾನಾಗಿ ಯುದ್ಧಕ್ಕೆ ಹೋಗಿಲ್ಲ. ಜನತೆ ಅಪೇಕ್ಷಿಸಿದಾಗ ದೂತ ಬಂದಾಗ ಹೋಗದೆ ಇರಲಿಲ್ಲ. ಇದು ದೊಡ್ಡವರ ಲಕ್ಷಣ. ಅವರು ಕರೆಬಾರದೆ ಹೊರಡರು. ಪೂತನಿ ಶಕಟಾದಿ ಅಸುರರೂ ಜರಾಸಂಧಾದಿ ದುಷ್ಟ ರಾಜರೂ ತಾವಾಗಿ ಯುದ್ಧಕ್ಕೆ ಕಾಲು ಕರೆದಾಗ ಶ್ರೀಕೃಷ್ಣ ನುಗ್ಗಿದ. ಇದರಿಂದ ಜನ ತಾವಾಗಿಯೇ ಪರರ ಪೀಡಿಸಬಾರದು. ಪೀಡಿಸಲು ಬಂದಾಗ ಅವರು ದುಷ್ಟರಾಗಿದ್ದರೆ ಬರೀ ಕೈಯಲ್ಲಿ ಹಿಂತಿರುಗಿಸಬಾರದು ಎಂಬ ತತ್ವವನ್ನು ತೋರಿಸುತ್ತಾನೆ. ಇಲ್ಲಿ ಶ್ರೀಕೃಷ್ಣನ ದುಷ್ಟ ಸಂಹಾರ, ಶಿಷ್ಟ ಪರಿಪಾಲನೆ ತತ್ವವು ಬೆಳಕು ಕಾಣುತ್ತದೆ. ಶ್ರೀಕೃಷ್ಣ ನರಕ, ಜರಾಸಂಧಾದಿಗಳ ಸಂಹಾರದ ಮರುಗಳಿಗೆಯಲ್ಲೇ ಬಂಧಿಸಲ್ಪಟ್ಟವರನ್ನು ಬಿಡಿಸಿದ. ಅವರ ಯೋಗಕ್ಷೇಮವನ್ನು ವಿಚಾರಿಸಿದ. ತಂದೆ ತಾಯಿಗಳಿಗೆ, ಹಿರಿಯರಿಗೆ ವಂದಿಸಿದ. ಹೊರತು ಬಂಧಿತ ಕೈದಿಗಳಿಂದ ದುಡ್ಡು ವಸೂಲು ಮಾಡಲಿಲ್ಲ. ಸಾಮಾನ್ಯ ಜನವಾದರೆ ಇತ್ತ ರಾಜ ಸತ್ತ ಕೂಡಲೇ ಅತ್ತ ಬೊಕ್ಕಸದೆಡೆಗೆ ಓಡುತ್ತಿತ್ತು. ಹೀಗೆ ಶ್ರೀಕೃಷ್ಣನು ವಿಷಮಪರಿಸ್ಥಿತಿಯಲ್ಲಿ ನಾವು ತುರ್ತು ಮಾಡಬೇಕಾದ ಕರ್ತವ್ಯದ ಬಗ್ಗೆ, ಗುರುಹಿರಿಯರಿಗೆ ಸಲ್ಲಿಸುವ ಗೌರವದ ಬಗ್ಗೆ ಸೂಚಿಸಿದ್ದಾನೆ. ದೊಡ್ಡವರು ಮಾತಾಡುವುದಿಲ್ಲ. ದೊಡ್ಡವರ ಕೆಲಸ ಮಾತಾಡುತ್ತೆ. ಅಲ್ಲದೆ ತ್ಯಾಗವು ಭೋಗದ ಅಣ್ಣ. ತ್ಯಾಗವು ಮನುಷ್ಯನನ್ನೆತ್ತುವ ಲಿಫ್ಟ್ ಎಂದು ತೋರಿಸಿಕೊಟ್ಟಿದ್ದಾನೆ. ಸ್ವಾತಂತ್ರ್ಯ ಸಮರ ನಂತರ ಗಾಂಧೀಜಿಯು ಸ್ವತಃ ದೇಶದ ಪ್ರಥಮ ಪ್ರಧಾನ ಮಂತ್ರಿಯಾಗುವ ವಿಪುಲ ಅವಕಾಶವಿತ್ತು. ಜನತೆಯೂ ಗೌರವಿಸುತ್ತಿತ್ತು. ನಾಯಕರೂ ಒಪ್ಪುತ್ತಿದ್ದರು. ಜಗತ್ತೂ ಪೂರ್ಣ ಸಮ್ಮತಿ ನೀಡುವುದಾಗಿತ್ತು. ಇಷ್ಟಿದ್ದೂ ಗಾಂಧಿಯವರು ಪ್ರಧಾನ ಮಂತ್ರಿಯ ಗಾದಿಗೆ ಲಗ್ಗೆ ಹಾಕದಿದ್ದುದು ಗೀತಾಚಾರ್ಯನ ಮೇಲೆ ಅವರಿಗಿದ್ದ ಅಪಾರ ಶ್ರದ್ಧೆ ಕಾರಣವಾಗಿರಬಹುದು. ಕಂಸಾದಿಗಳ ಸಿಂಹಾಸನವನ್ನು ತೃಣೀಕರಿಸಿ ನಿಷ್ಕಾಮಕರ್ಮದ ಉಪದೇಶ ನೀಡಿದ ಗೀತಾಚಾರ್ಯನ ಪ್ರಭಾವ ಅವರ ಮನದಲ್ಲಿ ಪ್ರತಿಫಲಿಸಿರಬಹುದು. ಹೀಗೆ ಗೀತಾಚಾರ್ಯ ಶ್ರೀಕೃಷ್ಣನು ಹೆಜ್ಜೆ ಹೆಜ್ಜೆಗೂ ನಿಷ್ಕಾಮ ಕರ್ಮದ ಬಗ್ಗೆ ಉಪದೇಶಿಸಿದ್ದು ಬಾಯಿಯಿಂದಲ್ಲ. ಸ್ವತಃ ಕೈಯಿಂದಲೇ. ಆದ್ದರಿಂದ ಶ್ರೀಕೃಷ್ಣನನ್ನು ಜಗತ್ತು ಗೌರವಿಸುತ್ತೆ.

ನಮ್ಮ ಸಮಾಜದಲ್ಲಿರುವ ಶ್ರೀಮಂತ ಬಡವರೆಂಬ ತರತಮದ ಬಗ್ಗೆ ಶ್ರೀಕೃಷ್ಣನು ತೋರಿದ ಆದ

ರ್ಶದ ದರ್ಶನ ಮಾಡೋಣ. ಬಡ ಕುಚೇಲನನ್ನು ಶ್ರೀಕೃಷ್ಣ ಸ್ವತಃ ಎಷ್ಟು ಸತ್ಕರಿಸಿದ? ಭೀಷ್ಮದುರ್ಯೋಧನರ ರಾಜಮರ್ಯಾದೆಗೂ ಬೆಲೆ ಕೊಡದೆ ವಿದುರನ ಮನೆಗೆ ಹೋದ. ಶ್ರೀರಾಮನು ಶಬರಿಯನ್ನೆಂಬಂತೆ. ಶ್ರೀಕೃಷ್ಣನಿಗೆ ಹೊರಗಿನ ಶ್ರೀಮಂತಿಕೆ, ಬಡತನ ಕಣ್ಣಿಗೆ ಕಾಣುವುದಿಲ್ಲ. ಅವನು ಅಂತರಂಗ ಸಂಪತ್ತನ್ನು ಅಪೇಕ್ಷಿಸುತ್ತಾನೆ. ಜ್ಞಾನ ಭಕ್ತ್ಯಾದಿಗಳೇ ಅವರ ಆಹಾರ. ಅದು ಅವನಿಗೆ ಬೇಕಾದದ್ದು. ಬೆಣ್ಣೆಯಂತಹ ಮೃದು ಮನಸ್ಸು ಶ್ರೀಕೃಷ್ಣನಿಗೆ ಬೇಕು. ಇದು ಭಗವಂತ ನರನಿಗೆ ಕೊಟ್ಟಿರುವ ವರ. ಒಂದು ವೇಳೆ ಒಂದು ಕೋಟಿ ರೂಪಾಯಿಗಳು ಕೊಟ್ಟರೆ ಮಾತ್ರ ಉದ್ಧಾರವೆಂದಿದ್ದರೆ ಭಕ್ತರ ಗತಿಯೇನಾಗಿದ್ದೀತು?

ಶ್ರೀಕೃಷ್ಣಾಜನ್ಮಾಷ್ಟಮಿ ಬಂತು. ಹಣವಿಲ್ಲ. ಬೆಲೆ ಏರಿದೆ. ಸಾಲ ಮಾಡಬೇಕಾಗುತ್ತೆ ಎಂದು ಮರುಗುವವರು ಕೆಲವರು. ಅಂಥವರಿಗೆ ಕುಚೇಲನು ತಂದ, ಶ್ರೀಕೃಷ್ಣನು ಕಸಿದು ಗಬ ಗಬನೆ ತಿಂದ, ಹಿಡಿ ಅವಲಕ್ಕಿಯು ಸಮಾಧಾನ ಹೇಳುತ್ತದೆ. ಬಾಧ್ಯತಃ ನಾವು ಯಥಾಶಕ್ತಿ ಮಾಡಿದರೂ ಅಂತರಂಗ ಭಕ್ತಿಗೇನು ಬರ? ಶ್ರೀಕೃಷ್ಣನು ಹೇಳುತ್ತಾನೆ -- 'ಪತ್ರಂ ಪುಷ್ಪಂ ಫಲಂ ತೋಯಂ ಯೋ ಮೇ ಭಕ್ತ್ಯಾ ಪ್ರಯಚ್ಛತಿ.'

ಇಲ್ಲಿ ಸಂಧಾನಕ್ಕೂ ಬಗ್ಗದ ದುರ್ಯೋಧನನಿಗೆ ಸಹಾಯ ಮಾಡಿ ನಿಷ್ಪಕ್ಷಪಾತತೆಯನ್ನು ತೋರಿಸಿ ಕೊಟ್ಟಿದ್ದಾನೆ. 'ಸಮಕರಿಷ್ಯೇಯುವಯೋಃ' ಎಂದು ತನ್ನನ್ನೂ ತನ್ನ ಲಕ್ಷೋಪಲಕ್ಷ ಮಕ್ಕಳನ್ನೇ ಕೊಟ್ಟು ಬಿಟ್ಟ. ಇದೊಂದು ಶ್ರೀಕೃಷ್ಣನ ಔದಾರ್ಯಕ್ಕೆ ದೊಡ್ಡ ಕನ್ನಡಿ.

ಅಂತಹ ಪರಾಕ್ರಮಿ ಶ್ರೀಕೃಷ್ಣ, ಭಕ್ತನಾದ ಅರ್ಜುನನ ಸಾರಥಿಯಾಗಿ ಅರ್ಜುನನಿಗಿಂತ ಕೆಳಗಡೆ ಕೂತು ಅವನನ್ನು ರಕ್ಷಿಸಿ ಜನರು ಹೇಗೆ ನಿರಹಂಕಾರಿಗಳಾಗಿರಬೇಕೆಂದು ಬೋಧಿಸಿದ. ಇಂತಹ ಶ್ರೀಕೃಷ್ಣನ ವ್ಯಕ್ತಿತ್ವವನ್ನು ಯಾವ ತಕ್ಕಡಿಯಲ್ಲಿಟ್ಟರೂ ಅದು ಮೇಲೇಳುವುದಿಲ್ಲ. ಯಾಕೆಂದರೆ ಅವನ ವ್ಯಕ್ತಿತ್ವದ ತಕ್ಕಡಿಯನ್ನು ಎಬ್ಬಿಸಬಲ್ಲ ಇನ್ನೊಂದು ತೂಕವಿಲ್ಲ. ಯಾಕೆಂದರೆ ಭಗವತ್ಗೀತೆಯಲ್ಲಿ ತಾನು ಆಡಿದ್ದನ್ನು ಸ್ವತಃ ಮಾಡಿ ತೋರಿಸಿದ್ದಾನೆ. ಮಹಾತ್ಮಗಳೆಲ್ಲ ಇಕ್ಷು ದಂಡದಂತೆ. ಹಿಂಡಿದರೆ ಬೇಕಾದಷ್ಟು ತತ್ವರಸ ಸುರಿಯುತ್ತೆ.

ಇಂದು ನಾವು ಶ್ರೀಕೃಷ್ಣನ ಕಥಾಸಮುದ್ರದಲ್ಲಿ ವಿಹರಿಸುತ್ತೇವೆ. ಆದರೆ ಸಮುದ್ರದಿಂದ ಮೇಲೆ ಬರುವಾಗ ಬರೀಕೈಯಲ್ಲಿ ಬರುತ್ತೇವೆ. ಸಮುದ್ರದಲ್ಲಿ ವಿಹಾರ ಮಾಡಿದರೆ ಮಾತ್ರ ಸಾಲದು. ಮೇಲೆ ಬರುವಾಗ ಕೈತುಂಬ ಹಿಡಿದುಕೊಂಡು ಬರಬೇಕು. ಶ್ರೀಕೃಷ್ಣನ ಕಥಾಸಮುದ್ರದಲ್ಲಿ ಮುಳುಗಿ ಆಳದಲ್ಲಿದ್ದ ತತ್ವರತ್ನಗಳನ್ನು ಎತ್ತಿ ತಂದು ಧಾರಣೆ ಮಾಡಬೇಕು. ಜೀವನಕ್ಕೆ ಮೆರುಗು ಕೊಡಬೇಕು. ಹಾಗಿದ್ದರೇ ಲಾಭ. ಚರಿತ್ರೆ ಇತಿಹಾಸಗಳ ಇಷ್ಟಿ ಬಾಯಿಪಾಠ ಹೊಡೆದು ಪ್ರಯೋಜನವಿಲ್ಲ. ಹೊರತು ಅವುಗಳಿಂದ ಹೊರಡುವ ಧ್ವನಿತವಾಗುವ ಧ್ವನಿಗಳಿಗೆ ಕಿವಿಗೊಡಬೇಕು. ಹಿಂದಿನವರು ಹೇಗಿದ್ದರು ಎಂಬುದು ಇತಿಹಾಸದ ಅಧ್ಯಯನ. ಇತರರ ಚರಿತ್ರೆ ಓದುವುದೆಂದರೂ ನಮ್ಮ ಚರಿತ್ರೆ ರಿಪೇರಿ ಮಾಡುವುದೆಂದರೂ ಒಂದೇ ಅರ್ಥ. ಇಂದು ಶ್ರೀಕೃಷ್ಣನು ನಮಗಿತ್ತ ಆದರ್ಶನಗಳನ್ನು ಕೇಳಿ ಅಳವಡಿಸಿಕೊಂಡರೆ ನಾವು ಮಾಡುವ ಭಕ್ಷ್ಯಭೋಜ್ಯಗಳಲ್ಲಿ ಹೂರಣ ತುಂಬುತ್ತೆ. ವೇಷಭೂಷಣಗಳಿಗೆ ರೂಪು ಬರುತ್ತೆ.

ಈ ದಶಕದಲ್ಲಿ ಇಂಡಿಯಾ ದೇಶದಲ್ಲಿ ನಮಗೆಲ್ಲಾ ಜನ್ಮಾಷ್ಟಮಿಯ ಆಚರಣೆಗೆ ಸರಿಯಾದ ಅವಕಾಶ ಸಿಗಲಿಲ್ಲವೆಂದು ತಿಳಿದೋ ಏನೋ ಐದು ಸಾವಿರ ವರ್ಷದ ಹಿಂದೆಯೇ ಭಾರತದ ಅದ್ವಿತೀಯ ರತ್ನ ಶ್ರೀಕೃಷ್ಣ ಭಗವಂತ ನಮಗೊಂದು ಅತಿ ದಿವ್ಯ ಉಪದೇಶವಿತ್ತಿದ್ದಾನೆ. 'ಯತ್ಕರೋಷಿ, ಯದಶ್ನಾಸಿ, ಯಜ್ಜುಹೋಷಿ, ದದಾಸಿಯತ್, ಯತ್ತಪಸ್ಯಸಿ ಕೌಂತೇಯ ತತ್ಕುರುಷ್ವ ಮದರ್ಪಣಂ' ನೀನು ಯಾವ ಸತ್ಕಾರ್ಯ ಮಾಡುತ್ತಿ, ಯಾವ ಸದಾಹಾರ ಸೇವಿಸುತ್ತಿ ಅದನ್ನು ನನಗೆ ಸಮರ್ಪಿಸಿದರಾಯಿತು. ವಿಶೇಷವೇನೂ ಬೇಕಾಗಿಲ್ಲ. ಎಂತಹ ಅತಿ ದಿವ್ಯ ಸಂದೇಶ. ಇದಕ್ಕೆ ಸಾಟಿಯುಳ್ಳ ಇನ್ನೊಂದು ಸಂದೇಶವಿಲ್ಲ. ನಾವು ಮಾಡುವ ಸತ್ಕರ್ಮಗಳನ್ನೇ ಸಮರ್ಪಿಸಿದರೂ ನಮ್ಮ ಜೀವನವೊಂದು ಪೂರ್ಣ ಯಜ್ಞವಾಗುತ್ತೆ. ಯಾವ ಉದ್ಯೋಗಸ್ಥರಾಗಲೀ ಯಾವ ನೌಕರನಾಗಲೀ ಯಾವುದೇ ಪ್ರಾಣಿಯಾಗಲೀ ತನ್ನ ಜೀವನವನ್ನು ಯಜ್ಞವನ್ನಾಗಿ ಪರಿವರ್ತಿಸಬಹುದು. ಇದರಿಂದ ಎಲ್ಲರೂ ಯಾವಾಗಲೂ ಭಗವತ್ಪೂಜೆ ಮಾಡಬಹುದು. ಈ ತತ್ವಕ್ಕೆ ಸದೃಶವಾದ ಇನ್ನೊಂದು ತತ್ವವಿರಲಿಕ್ಕಿಲ್ಲ. ಇದೇ ಶ್ರೀಕೃಷ್ಣನು ಜಗತ್ತಿಗೆ ಹರಿಸಿದ ಶ್ರೇಷ್ಠ ಉಪದೇಶಾಮೃತ. ಇದು ಹಿಂದೂ ಧರ್ಮದ ವೈಶಿಷ್ಟ್ಯ. ಇಂತಹ ಅತಿ ದಿವ್ಯ ತತ್ವವನ್ನು ಉಪದೇಶಿಸಿದ್ದಕ್ಕಾಗಿಯೇ ಇಂದು ಜಗತ್ತು ಶ್ರೀಕೃಷ್ಣನಿಗೆ ತಲೆ ಬಾಗಿಸುತ್ತದೆ.

--ಶ್ರೀ ಶ್ರೀ ಸುಗುಣೇಂದ್ರ ತೀರ್ಥರು



### ಕೊಡೆಗಳ ನೀಡಿಕೆ ಯೋಜನೆ

ವಿವಿಧ ದೇವಾಲಯಗಳಿಗೆ ಉತ್ಸವಾದಿಗಳಲ್ಲಿ ಬಳಸಲು ಆಲಯೋಪಯೋಗಿ ಕೊಡೆಗಳನ್ನು (ಶ್ವೇತ ಛತ್ರಗಳು) ರಿಯಾಯಿತಿ ದರಗಳಲ್ಲಿ ನೀಡಲು ತೀರ್ಮಾನಿಸಲಾಗಿದ್ದು, ಈ ಯೋಜನೆಯಂತೆ ವಿವಿಧ ದೇವಾಲಯಗಳವರು ಕೊಡೆಗಳಿಗಾಗಿ 50 ಶತಾಂಶ ರಿಯಾಯಿತಿಯ ಹಣ ರೂ. 1000/- ವನ್ನು ಕಾರ್ಯನಿರ್ವಹಣಾಧಿಕಾರಿ ತಿ.ತಿ.ದೇ. ತಿರುಪತಿ ಇವರ ಹೆಸರಿಗೆ ಬ್ಯಾಂಕ್ ಡಿ.ಡಿ.ಯ ರೂಪದಲ್ಲಿ ಕಳುಹಿಸುತ್ತ ಆಯಾ ಜಿಲ್ಲೆಗಳ ಅಸಿಸ್ಟೆಂಟ್ ದೇವಾದಾಯ (ಮುಜರಾಯಿ) ಕಮಿಷನರ್ ಮೂಲಕವಾಗಿ ತಮ್ಮ ಅಭ್ಯರ್ಥನೆಗಳನ್ನು ಕಳುಹಿಸಿದಲ್ಲಿ ಮಾತ್ರವೇ ನೀಡಲಾಗುವುದು. ಕೊಡೆಗಳನ್ನು ತಿರುಪತಿಯಿಂದ ಆಯಾ ದೇವಾಲಯಗಳವರೇ ಕೊಂಡೊಯ್ಯಬೇಕಾಗುವುದು.

ವಿವರಗಳಿಗಾಗಿ ಬರೆಯಿರಿ:---ಕಾರ್ಯನಿರ್ವಹಣಾಧಿಕಾರಿ, ತಿ.ತಿ.ದೇ. ತಿರುಪತಿ.

### ಧ್ವನಿವರ್ಧಕ ವಿತರಣಾಯೋಜನೆ

ವಿವಿಧ ಹಿಂದೂ ದೇವಾಲಯಗಳಲ್ಲಿ ಧಾರ್ಮಿಕ ಕಾರ್ಯಕ್ರಮಗಳ ಪ್ರಸಾರಕ್ಕಾಗಿ ತಿ. ತಿ.ದೇ. ಗಳ ವತಿಯಿಂದ ಧ್ವನಿವರ್ಧಕಗಳನ್ನು ರಿಯಾಯಿತಿ ದರದಲ್ಲಿ ನೀಡುವ ಯೋಜನೆಯಿದೆ. 50 ಶತಾಂಶ ರಿಯಾಯಿತಿಯಲ್ಲಿ ನೀಡಲಾಗುವ ಧ್ವನಿವರ್ಧಕಗಳಿಗಾಗಿ ದೇವಾಲಯಗಳವರು ನೀಡಬೇಕಾದ ಮೊತ್ತ ರೂ. 3370/- ಈ ಹಣಕ್ಕೆ ಬ್ಯಾಂಕ್ ಡಿ.ಡಿ.ಯನ್ನು ಕಾರ್ಯನಿರ್ವಹಣಾಧಿಕಾರಿ ತಿ.ತಿ.ದೇ. ತಿರುಪತಿ ಇವರ ಹೆಸರಿನಲ್ಲಿ ಪಡೆದು ಆಯಾ ಜಿಲ್ಲೆಯ ಅಸಿಸ್ಟೆಂಟ್ ಮುಜರಾಯಿ ಕಮಿಷನರ್ ಅವರ ಮೂಲಕ ತಮ್ಮ ಅರ್ಜಿಗಳನ್ನು ಕಳುಹಿಸಬಹುದು.

ವಿವರಗಳಿಗಾಗಿ ಬರೆಯಿರಿ :
**---ಕಾರ್ಯನಿರ್ವಹಣಾಧಿಕಾರಿ,**
ತಿ.ತಿ.ದೇ. ತಿರುಪತಿ.

# ಲೋಕನಾಯಕ ಕೃಷ್ಣ

ಪಿ. ಎಸ್. ಕೃಷ್ಣಭಟ್---.

ಯದಾ ಯದಾಹಿ ಧರ್ಮಸ್ಯ
ಗ್ಲಾನಿರ್ಭವತಿ ಭಾರತ
ಅಭ್ಯುತ್ಥಾನ ಮಧರ್ಮಸ್ಯ
ತದಾತ್ಮಾನಾಂ ಸೃಜಾಮ್ಯಹಂ

(ಭಗವದ್ಗೀತೆ)

ಧರ್ಮ ಹಾಳಾದಾಗ ಧರ್ಮೋದ್ಧರಣಕ್ಕೆ ತನ್ನ ಅವತಾರವಾಗುವುದೆಂಬ ವೇದವಾಕ್ಯ ತನ್ನ ಬಾವನ ಬಂಡಿಯ ಬೋವನಾದ ಶ್ರೀಕೃಷ್ಣಪರಮಾತ್ಮನ ಬಾಯಿಯಿಂದ ಹೊರಹೊಮ್ಮಿದೆ. ಅಂತಹ ಮಹಾನ್ ವ್ಯಕ್ತಿಯ ಹುಟ್ಟು, ಆಟ, ಪಾಠ, ವಿನೋದ -- ವಿಹಾರಗಳನ್ನು ಅವಲೋಕಿಸಿದಾಗ ನಮ್ಮ ಜನ್ಮ ಪಾವನವಾಗುವುದಲ್ಲದೆ, ಜೀವನ ಸಾರ್ಥಕವಾಗುತ್ತದೆ. ಆತನ ಶೌರ್ಯ ಪರಾಕ್ರಮಗಳು ದುಷ್ಟರ ನಾಶ, ಹಾಗೂ ಶಿಷ್ಟರ ರಕ್ಷಣೆಗಾಗಿ ಮೀಸಲಾಗಿದ್ದವು.

ಆತನ ಜನ್ಮ ದೇವಕಿಯ ಎಂಟನೆಯ ಗರ್ಭದಲ್ಲಾಗಿದ್ದು, ಸುಮಾರು ಐದು ಸಾವಿರ ವರ್ಷಗಳ ಹಿಂದೆ ಎಂದು ಹೇಳಲಾಗುತ್ತಿದೆ. ಅಂದಿನ ಭಾರತದ ಸ್ಥಿತಿ ಅಂಧಕಾರಮಯವಾಗಿತ್ತು. ಎಲ್ಲೆಡೆಗಳಲ್ಲೂ ಧರ್ಮಭೀರುಗಳು ಹೆದರಿಕೆಯಿಂದ ನಡುಗುತ್ತಿದ್ದರು. ದುಷ್ಕರ್ಮಿಗಳ ಆಟಾಟೋಪ ಆರ್ಭಟಗಳು ಮೇರೆ ಮೀರಿದ್ದವು. ಅಂತಹ ಸಂದರ್ಭದಲ್ಲಿ ಭಾದ್ರಪದದ ಕೃಷ್ಣಪಕ್ಷದ ಅಷ್ಟಮಿಯಲ್ಲಿ ಅವನ ಜನನವಾಯಿತು. ಅವನ ಜೀವನದಲ್ಲಿ ಎಂಟರ ಮಹತ್ವ ಬಹಳ. ಹುಟ್ಟಿದ್ದೂ ಎಂಟನೆಯ ದಿನ, ಗರ್ಭವೂ ಎಂಟನೆಯದೇ, ಹಾಗೆಯೇ ದಶಾವತಾರಗಳಲ್ಲಿ ಅದು ಎಂಟನೆಯ ಅವತಾರವೆಂದೇ ಗಣಿಸಲ್ಪಟ್ಟಿದೆ.

ಆ ಕಾಲದಲ್ಲಿ ಶಕ್ತಿಶಾಲಿಯಾದ ಕೇಂದ್ರವಿಲ್ಲದೆ ಲೋಕವೇ ಉಲ್ಲೋಲಕಲ್ಲೋಲವಾದಂತಿದ್ದು, ಎಲ್ಲೆಡೆಗಳಲ್ಲಿ ಕಂಸನಂತಹ ರಕ್ಕಸಪಡೆ ಸ್ವೇಚ್ಛಾಚಾರಿಯಾಗಿ ವಿಜೃಂಭಿಸುತ್ತಿತ್ತು. ಶ್ರೀಕೃಷ್ಣನ ಹುಟ್ಟಿನ ರಾತ್ರಿಯೂ ಅತ್ಯಂತ ಭೀಕರವಾಗಿತ್ತು. ಪ್ರಕೃತಿ ಮಾತೆಯು ತನ್ನ ಭೈರವೀ ರೂಪ ಧರಿಸಿದ್ದಳು. ಆಕಾಶವು ಕಗ್ಗತ್ತಲೆಯ ಸಿಡಿಲು ಮಿಂಚುಗಳ ಧಾಳಿಯಿಂದ ಪ್ರಕ್ಷುಬ್ಧವಾಗಿತ್ತು. ಒನಕೆಯ ಗಾತ್ರದ ನೀರ ಹನಿಗಳು ಉರುಳುತ್ತಿದ್ದುವು. ಅಂತಹ ಕಾರ್ಗತ್ತಲೆಯ ಭಯಾನಕ ವಾತಾವರಣದಲ್ಲಿ ಕಂಸನ ಕಾರಾಗಾರದಲ್ಲಿ ಪರಮಾತ್ಮ ಸಿರಿಕೃಷ್ಣನ ಜನನ. ಅಲ್ಲಿಂದಲೇ ಅವನ ಪವಾಡಗಳ ಆರಂಭ.

ಏಳನೇ ಅವತಾರ ಮರ್ಯಾದಾ ಪುರುಷೋತ್ತಮ ಶ್ರೀರಾಮಚಂದ್ರನಾದರೆ, ಎಂಟನೇ ಅವತಾರ ಕಪಟನಾಟಕ ಸೂತ್ರಧಾರಿ, ಪವಾಡಗಳ ಮಹಾಪುರುಷ ಶ್ರೀಕೃಷ್ಣ ಪರಮಾತ್ಮ. ಹೆಜ್ಜೆ ಹೆಜ್ಜೆಗೂ ಆತನ ಪವಾಡಗಳು ಅದ್ವಿತೀಯ. ನಂದಗೋಕುಲದ ನಂದನವನದಲ್ಲಿ ಬೆಳೆಯುವಂತೆ ಮಾಡಲು ಮೊದಲೇ ಆದೇಶ ವಸುದೇವನಿಗೆ ಆ ಬಾಲ ರೂಪೀ ಪರಮಾತ್ಮನಿಂದ. ಕಾವಲುಗಾರರಿಗೆ ನಿದ್ರೆಯ ಮಾಯಾ ಮುಸುಕು. ಯಮುನಾನದಿಯ ಇಬ್ಭಾಗ, ಶೇಷನ ಕೊಡೆಯ ನೆರಳು, --ಎಂಬ ಆಶ್ಚರ್ಯದ ಅನುಭೂತಿಗಳಲ್ಲಿ ಅವತಾರದ ಸ್ಪಷ್ಟ ಚಿಹ್ನೆಗಳು ಕಂಡುಬರುತ್ತದೆ.

ನಂದಗೋಕುಲದವರಿಗೆ ಆನಂದಸಾಗರವಾಗಿದ್ದ ಕೃಷ್ಣ. ಅವನ ಬಾಲ ಲೀಲೆಗಳು ಆನಂದದಾಯಕವಾಗಿದ್ದು, ಹಲವು ಜಗಜಟ್ಟಿಗಳನ್ನು ಉರುಳಿಸಿ, ಮಾವನನ್ನು ಯಮಸದನಕ್ಕಟ್ಟಿದ. ಅಜ್ಜ ಉಗ್ರಸೇನನಿಗೆ ಪಟ್ಟ ಕಟ್ಟಿದ. ಮಾತಾಪಿತರನ್ನು ಸೆರೆಯಿಂದ ಬಿಡಿಸಿ ಶಿಷ್ಟರೆಲ್ಲರನ್ನು ಬದುಕಿ ಬಾಳುವಂತೆ ಮಾಡಿದ.

ಗೀತೋಪದೇಶ ಮಾಡುವಾಗ ಕೃಷ್ಣ 'ದ್ವಾರಕಾ' ನಗರದವನಾಗಿದ್ದ. ಅಂತಹ ಕೃಷ್ಣ ಬಾಲ್ಯದಲ್ಲಿ ತುಂಟನೂ, ಚಟುವಟಿಕೆಯಿಂದ ಕೂಡಿದವನೂ, ಉತ್ತಮ ಸಂಘಟಕನೂ ಆಗಿದ್ದನು. ಅವನ ಮುರಳಿಯ ಗಾನಕ್ಕೆ ಹಸುಗಳೂ, ಮಾನವರೂ ಆಕರ್ಷಿತರಾಗಿ ಸ್ವರ್ಗ ಸುಖದಲ್ಲಿ ಮೀಯುತ್ತಿದ್ದರು.

ಕಂಸನ ವಧೆಯ ನಂತರ ಕೆಲವೇ ವರ್ಷಗಳಲ್ಲಿ ಆತ ರುಕ್ಮಿಣೀವಲ್ಲಭನಾದ. ಸತ್ಯಭಾಮಾರಮಣನಾದ, ಮಾತ್ರವಲ್ಲ ಜಾಂಬವತೀಪತಿಯಾದ. ಅಲ್ಲಿಯೂ ಅವನಿಗೆ ಎಂಟರ ನಂಟು ಬಿಡಲಿಲ್ಲ. ಅವನಿಗೆ ಎಂಟು ಮಂದಿ ಪಟ್ಟದ ರಾಣಿಯರಿದ್ದರು. ಉತ್ಕೃಷ್ಟವಾದ ಸ್ಯಮಂತಕ ಮಣಿ ಅವನ ಕೈಸೇರಿತ್ತು.

ಮನತೆತ್ತ ಮಾನಿನಿಯರನ್ನು ತಮ್ಮಿಷ್ಟದ ಪುರುಷರೊಡನೆ ಒಂದುಗೂಡಿಸುವ ಅವನ ಮಹತ್ತರ ಕಾರ್ಯ ಸುಭದ್ರಾ ವಿವಾಹದ ಸಂದರ್ಭದಲ್ಲಿ ಸ್ಪಷ್ಟವಾಗಿ ಕಾಣುತ್ತದೆ. ಹಿರಿಯಣ್ಣ ತಂದ ದುರ್ಯೋಧನ



ಓದಿರಿ. ಓದಿಸಿರಿ.

# ಸಪ್ತಗಿರಿ

ತಿರುಮಲೆ -- ತಿರುಪತಿ ದೇವಸ್ಥಾನಗಳ ಧಾರ್ಮಿಕ ಮಾಸಪತ್ರಿಕೆ ಸಪ್ತಗಿರಿ.

ತೆಲುಗು ತಮಿಳು ಕನ್ನಡ ಹಿಂದಿ ಆಂಗ್ಲ ಭಾಷೆಗಳಲ್ಲಿ ಬೇರೆ ಬೇರೆಯಾಗಿ ಪ್ರಕಟವಾಗುವ ಪತ್ರಿಕೆ.

ಆಧ್ಯಾತ್ಮಿಕ, ಸಾಂಸ್ಕೃತಿಕ, ಧಾರ್ಮಿಕ ವಿಷಯಗಳೊಂದಿಗೆ ವಿಶೇಷಗಳೊಂದಿಗೆ ಪ್ರಕಟವಾಗುವ ಪತ್ರಿಕೆ.

ಸಪ್ತಗಿರಿ ಚಂದಾದಾರರಾಗ ಬಯಸುವವರು ಈ ಕೆಳಗಿನ ಸೂಚನೆಗಳನ್ನು ಗಮನಿಸಬೇಕೆಂದು ಪ್ರಾರ್ಥನೆ.

* ಸಪ್ತಗಿರಿಯ ವಾರ್ಷಿಕ ಚಂದಾ ಇಪ್ಪತ್ನಾಲ್ಕು ರೂಪಾಯಿಗಳು ಮಾತ್ರ. ಎಷ್ಟು ವರ್ಷದ ಚಂದಾ ಹಣವನ್ನಾದರೂ ತುಂಬಬಹುದು. (ಆಜೀವ ಸದಸ್ಯತ್ವವಿಲ್ಲ)
* ತಮ್ಮ ಚಂದಾ ಹಣವನ್ನು ಸಂಪಾದಕರು, ಸಪ್ತಗಿರಿ, ತಿ.ತಿ.ದೇ. ತಿರುಪತಿ ಇವರ ಹೆಸರಿಗೆ ಎಂ.ಓ./ಡಿ.ಡಿ./ಪಿ.ಓ. ರೂಪದಲ್ಲಿ ಕಳುಹಿಸಿ (ಚೆಕ್‌ಗಳನ್ನು ಅಂಗೀಕರಿಸಲಾಗದು).
* ತಮಗೆ ಯಾವ ಭಾಷೆಯ ಸಪ್ತಗಿರಿ ಬೇಕೆಂಬುದನ್ನು ಸ್ಪಷ್ಟವಾಗಿ ಬರೆಯಿರಿ.
* ತಮ್ಮ ಪೂರ್ಣ ವಿಳಾಸವನ್ನು ಬಿಡಿಬಿಡಿಯಾದ ಅಕ್ಷರಗಳಲ್ಲಿ ಸ್ಪಷ್ಟವಾಗಿ ಬರೆಯಿರಿ. (ಎಂ. ಓ. ಕೂಪನ್ನಿನ ವಿಷಯ ಬರೆಯುವ ಸ್ಥಳದಲ್ಲಿ)
* ಚಂದಾ ಹಣ ತಲುಪಿದ ಮಾರನೆಯ ತಿಂಗಳಿನಿಂದ ಸಪ್ತಗಿರಿಯನ್ನು ಕಳುಹಿಸಲಾಗುವುದು.
* ಚಂದಾ ಹಣವನ್ನು ಕಳುಹಿಸಿದ 30 ದಿನಗಳಲ್ಲಿ ಸಪ್ತಗಿರಿ ತಮಗೆ ಬಾರದಿದ್ದಲ್ಲಿ ತಮ್ಮ ಎಂ.ಓ./ಡಿ.ಡಿ. ಕ್ರಮಸಂಖ್ಯೆ ದಿನಾಂಕ ಮೊದಲಾದ ವಿವರಗಳೊಂದಿಗೆ ಪೂರ್ಣವಿಳಾಸವನ್ನು ನೀಡಿ ಕಾಗದ ಬರೆಯಿರಿ.

ಈ ಮೊದಲೇ ಚಂದಾದಾರರಾದವರಿಗೆ ಸೂಚನೆಗಳು :

* ತಮ್ಮ ಚಂದಾ ಮೊಬಲಗು ಮುಗಿಯುವ ಒಂದು ತಿಂಗಳ ಮೊದಲೇ ಪುನಃ ಚಂದಾಹಣವನ್ನು ಇತರ ಕಾರಣಗಳಿಗಾಗಿ ಬರೆಯುವಾಗ ದಯವಿಟ್ಟು ತಮ್ಮ ಸದಸ್ಯತ್ವ ಸಂಖ್ಯೆಯನ್ನು ತಪ್ಪದೇ ತಮ್ಮ ವಿಳಾಸದೊಡನೆ ನಮೂದಿಸಿ ಬರೆಯಿರಿ.

ಸಂಪಾದಕರು :

**ಸಪ್ತಗಿರಿ**

ತಿ.ತಿ.ದೇ., ತಿರುಪತಿ.

ಕೊಂಡು ಓದಿರಿ. ಕೊಂಡು ಓದಿಸಿರಿ.

ಬರಿಗೈಯಿಂದ ಪೆಚ್ಚುಮೋರೆ ಹಾಕಿ ಹಿಂತಿರುಗ ವಂತೆ ಮಾಡಿದ್ದ ಶ್ರೀಕೃಷ್ಣ. ಸುಭದ್ರಾರ್ಜುನರು ದಂಪ ತಿಗಳಾಗಿ ಅಭಿಮನ್ಯುವಿನ ಮಾತಾಪಿತರಾದರು.

ಶ್ರೀಕೃಷ್ಣನ ಕಾರ್ಯಗಳಲ್ಲಿ ಅಜರಾಮರವಾ ಕಾರ್ಯವೆಂದರೆ ಗೀತೋಪದೇಶ. ಅದಕ್ಕೆ ಎಲ್ ಡೆಗಳಲ್ಲೂ ಅತ್ಯಂತ ಉನ್ನತ ಸ್ಥಾನ; ಈ ವಿಜ್ಞಾ ಯುಗದಲ್ಲೂ ಇದ್ದೇ ಇದೆ. ಕೃಷ್ಣನು ಪಟ್ಟಾ ಷಿಕ್ತ ಚಕ್ರವರ್ತಿಯಲ್ಲದಿದ್ದರೂ, ಚಕ್ರಧಾರಿಯಾಗಿ ಹಾಗೂ ತನ್ನಿಷ್ಟದಂತೆ ಚಕ್ರವರ್ತಿಗಳನ್ನು ಕುಣಿಸ ವವನಾಗಿದ್ದ. ಅವನು ಯೋಗಿಯಲ್ಲದಿದ್ದರೂ ಯೋಗೇಶ್ವರನಾಗಿದ್ದ. ಅವನು ತನ್ನ ಕೈಬೆರಳಿತ್ತು ಹೊತ್ತಿನಲ್ಲಿ ಲೋಕವನ್ನೇ ಅಡಿಮೇಲು ಮಾಡ ಲ್ಲವನಾಗಿದ್ದರೂ ವಿಧಿಯ ಆದೇಶಕ್ಕೆ ತಲೆಬಾಗು ವನಾಗಿದ್ದ. ಅವನೆಂದೂ ತನ್ನ ಶಕ್ತಿಯ ದುರು ಯೋಗ ಮಾಡಲಿಲ್ಲ.

ಶ್ರೀಕೃಷ್ಣ ಪರಮಾತ್ಮನು ಭಕ್ತವತ್ಸಲನಾಗಿದ್ದ ಮಾತ್ರವಲ್ಲ ಅವರವರ ಭಾವಕ್ಕೆ ತಕ್ಕಂತೆ ಸ್ಪಂದಿಸ ತ್ತಿದ್ದ. ತಂದೆಗೆ ತಕ್ಕ ಮಗನಾಗಿ, ಸತಿಗೆ ಸರಿಯಾ ಪತಿಯಾಗಿ, ಮಾತೆಗೆ ಯೋಗ್ಯ ಪುತ್ರನಾಗಿ, ವರ್ತಿಸ ತ್ತಿದ್ದ. ಅವನು ಗೊಲ್ಲರ ಮಧ್ಯದಲ್ಲಿ ಗೋವಳನ ಗುತ್ತಿದ್ದ. ರಸಿಕರಲ್ಲಿ ರಸಿಕ ಶಿಖಾಮಣಿಯಾಗಿ ರಂ ಸುತ್ತಿದ್ದ. ತುಂಟರಲ್ಲಿ ಕಡುತುಂಟನಾಗಿ ಗೋಳ ಹೊಯ್ಯುತ್ತಿದ್ದ. ಯೋಧರ ಮಧ್ಯೆ ಮಹಾನ ಯೋಧನಂತೆ ವರ್ತಿಸುತ್ತಿದ್ದ. ವಿದ್ವಾಂಸರ ಮ ಶೋಭಿಸಿ ಅಗ್ರಪೂಜೆಗೆ ಅರ್ಹತೆ ಪಡೆಯುತ್ತಿ ರಾಜಕಾರಿಣಿಗಳಲ್ಲಿ ಮಹಾನ್ ರಾಜಕಾರಿಣಿಯ ಗಿದ್ದ. ಯೋಗಿಗಳ ಮಧ್ಯೆ ಸಂತ ಯೋಗೇಶ್ವರನ ಆಗಿದ್ದ. ಮಾನವನ ಉತ್ತಮ ಗುಣಗಳೆಲ್ಲವೂ ಅ ನಲ್ಲಿದ್ದುವೆಂದರೂ ತಪ್ಪಲ್ಲ. ಎಲ್ಲೆಡೆಗಳಲ್ಲೂ ಶೋ ಸುವ ಹುಣ್ಣಿಮೆಯ ಚಂದಿರನಂತೆ, ಎಲ್ಲಾ ಕ್ಷೇತ್ರ ಳಲ್ಲೂ ಅವನು ಶೋಭಾಯಮಾನವಾಗಿದ್ದನು.

ಕುರುಕ್ಷೇತ್ರ ಯುದ್ಧದ ಆರಂಭದಲ್ಲಿ ವಿವ ನಾಗಿದ್ದ ಅರ್ಜುನನನ್ನು ತನ್ನ ವಾಗ್ಜಾಲದಿಂ ಗೀತೋಪದೇಶ ಮಾಡಿ "ನೀನೆಂದಂತೆ ನಾನ ಮಾಡುವೆ" ಎಂಬಲ್ಲಿಯವರೆಗೆ ಪರಿವರ್ತಿಸಿ ಮಹಾ ವಾಕ್ಪಟು ಶ್ರೀಕೃಷ್ಣ. ಅವನ ನೀತಿ ಸ ಮತ್ತು ನ್ಯಾಯದ ಕಟ್ಟುಪಾಡುಗಳಿಗೆ ಒಳಗಾಗಿತ್ತ ಅವನು ಧರ್ಮದ ಪರಿಪಾಲಕನಾದ್ದರಿಂದ "ಮ ಪ್ರಾಣಾಹಿ ಪಾಂಡವಾಃ" ಎಂದಂದು ಅವರ ರಕ್ಷಣೆ ಮುಂದಾದ. ಕೊನೆಗೆ ಸತ್ಯದ ಗೆಲುವಿಗೆ ಕಾರಣನಾ ಜಗದ್ವಂದ್ಯ ಲೋಕನಾಯಕ ಸಿರಿಕೃಷ್ಣನಾಗಿ ಮೆರೆ ಅವನ ಕಾರ್ಯಭಾರಗಳು ಎಂದೆಂದೂ ಆದ ವಾಗಿದ್ದು ಜಗತ್ತಿನ ಏಳಿಗೆಗೆ ಪೂರಕಗಳಾಗಿವೆ.

(ಸಾಧಾ

# ರಕ್ಷಾಬಂಧನ

---ಹೊನ್ನಾವರ ಆರ್.ಜಿ. ಶ್ಯಾನಭಾಗ.

ಹಬ್ಬ ಹರಿದಿನಗಳ ಆಚರಣೆಯಲ್ಲಿ ವಿಶ್ವದಲ್ಲೇ ಭಾರತ ಪ್ರಥಮ ಸ್ಥಾನವನ್ನು ಆಕ್ರಮಿಸಿಕೊಂಡಿದೆ. ಅವುಗಳ ಆಚರಣೆಯು ಸನಾತನವಾದದ್ದು, ಲೋಕ ಕಲ್ಯಾಣ ಹಾಗೂ ನೈತಿಕ ಅಭಿವೃದ್ಧಿಗಾಗಿಯೇ ಅವು ಗಳ ಆಚರಣೆಗಳು ಬೇರು ಬಿಟ್ಟಿವೆ. ಅವುಗಳ ಉದ್ದೇಶ ಹಾಗೂ ರಹಸ್ಯಗಳನ್ನು ಪರಿಚಯಿಸಲು ಈ ಪರ್ವಕಾಲಗಳು ಆವರ್ತರೂಪದಲ್ಲಿ ಬರುತ್ತಿರು ತ್ತವೆ. ಅಂಥ ಹಬ್ಬಗಳಲ್ಲಿ ವಿರೋಚಿತ ಹಬ್ಬವಾದ ರಕ್ಷಾಬಂಧನವು ಒಂದಾಗಿದೆ. ಇದಕ್ಕೆ ರಾಖೀ ಹಬ್ಬ ಎನ್ನುವುದು ಇನ್ನೊಂದು ಹೆಸರು.

## ಶ್ರೀರಕ್ಷೆ :

ಶ್ರಾವಣ ಶುದ್ಧ ಹುಣ್ಣಿಮೆಯ ದಿನ ಸಹೋದರಿ ಯರು ತಮ್ಮ ಸಹೋದರರಿಗೆ ರಾಖಿಯನ್ನು ಕಟ್ಟು ತ್ತಾರೆ. ರಾಖಿ ಮಾರ್ಕೆಟಿನಲ್ಲಿ ದೊರಕುವ ಚಿತ್ತಾ ಕರ್ಷಕವಾದ ರೇಷ್ಮೆ ಹಾಗೂ ನೂಲಿನ ಮಿನುಗು ಎಳೆಯ ದಾರಕ ಸರಕು ಎನ್ನುವುದು ನಮ್ಮ ಭಾವ ನೆಯಾದರೂ ಇದು ಪಾವಿತ್ರ್ಯ ಹಾಗೂ ಆದರ್ಶದ ಪ್ರತೀಕ.ನಮ್ಮ ಬದುಕಿನ ಸಂರಕ್ಷಣೆಗೆ ಕಟ್ಟಲ್ಪಡುವ ಶ್ರೀರಕ್ಷೆ.

ರಕ್ಷಾ ಬಂಧನ ವಿಜಯ ಹಾಗೂ ಸಂರಕ್ಷಣೆಯ ಸಾಧನ ಎನ್ನುವುದರ ಸುತ್ತ ಹಲವಾರು ಪೌರಾ ಣಿಕ ಕಥೆಗಳಿವೆ. ರಣರಂಗವನ್ನು ಪ್ರವೇಶಿಸುತ್ತಿದ್ದ ಇಂದ್ರನಿಗೆ ಶಚೀದೇವಿ ಅವನ ಮುಂಗೈಗೆ ರಕ್ಷಾ ಬಂಧನವನ್ನು ಕಟ್ಟುತ್ತಿದ್ದಳು. ಇದರ ಬಲದಿಂದಲೇ ಇಂದ್ರನು ಹೋದ ಕಡೆಗಳೆಲ್ಲ ವಿಜಯದ ಕಹಳೆ ಯನ್ನು ಮೊಳಗಿಸುತ್ತಿದ್ದನು. ಪಂಚಪಾಂಡವರ ದಿಗ್ವಿ ಜಯಗಳಿಗೆಲ್ಲ ತಾಯಿ ಕುಂತಿಯು ಮಕ್ಕಳಿಗೆ ಕಟ್ಟು ತ್ತಿರುವ ರಕ್ಷಾಬಂಧನವೇ ಕಾರಣ ಎಂದು ಹೇಳಲಾ ಗುತ್ತಿದೆ. ರಕ್ಷಾಬಂಧನದ ಶ್ರೀರಕ್ಷೆ ಇಲ್ಲದೆ ವೀರ ಅಭಿ ಮನ್ಯು ಚಕ್ರವ್ಯೂಹದಲ್ಲಿ ಸೋಲನ್ನು ಅನುಭವಿಸದೇ ಕಾಯಿತು.

ವಿಶ್ವವನ್ನು ಕಬಳಿಸುವ ದಾನವಶಕ್ತಿಯ ಅಸು ರೀಗುಣಗಳನ್ನು ದಮನಗೊಳಿಸಿ ಆದಿಶಕ್ತಿಯಿಂದ ರಕ್ಷಣೆ ಪಡೆದುದ್ದರ ನೆನಪಿಗಾಗಿ ರಕ್ಷಾಬಂಧನದ ಆಚರಣೆಯು ರೂಢಿಯಾಗಿ ಬಂದಿದೆ. ಧರ್ಮ ಆದರ್ಶ, ಪಾವಿತ್ರ್ಯಗಳ ರಕ್ಷಣೆಗಾಗಿ ಮನುಕುಲವು ಗೈದಿರುವ ರಕ್ತ ತರ್ಪಣ ತ್ಯಾಗ ಹಾಗೂ ಬಲಿದಾನದ ಹಿನ್ನೆಲೆಯಲ್ಲಿ ಸಹೋದರಿಯರು ತಮ್ಮ ಸಹೋದ ರರಿಗೆ ವಿರೋಚಿತ ಪಣತೊಡಲು ಆಣೆಯಾಗು ವುದರ ಪ್ರತೀಕವಾಗಿ ರಾಖಿಯನ್ನು ಕಟ್ಟಲಾರಂಭಿಸಿ ದರು.

## ಮೋಕ್ಷ ಸಾಧನ :

ರಕ್ಷಾಬಂಧನದ ಸಮಯ ಪುಣ್ಯ ಪ್ರದಾಯಕ ಪರ್ವ ಹಾಗೂ ವಿಷನಿವಾರಕ ಪರ್ವವೂ ಅಹುದು. ಕಾಮ ಕ್ರೋಧ ಲೋಭ ಮದ ಮತ್ಸರ ಅಹಂಕಾ ರಾದಿ ಷಡ್ವೈರಿಗಳನ್ನು ಜಯಿಸಿ ಆತ್ಮವನ್ನು ರಕ್ಷಿಸಿ ಕೊಳ್ಳಲು ಪವಿತ್ರ ಕಂಕಣವಾಗಿ ರಕ್ಷಾಬಂಧನವನ್ನು ಕೈಕೊಳ್ಳುತ್ತಾರೆ. ರಕ್ಷಾಬಂಧನವು ಪ್ರೇಮ ಬಂಧ ನವೂ ಆಗಿದೆ. ಸಹೋದರಿಯರು ತಮ್ಮ ಪ್ರೇಮ ವನ್ನು ಸಹೋದರರ ಮೇಲೆ ಶಾಶ್ವತವಾಗಿ ನೆಲೆಗೊ ಳಿಸಲು ಮಣಿಕಟ್ಟಿಗೆ ರಕ್ಷಾಬಂಧನವನ್ನು ಕಟ್ಟುವರು. ಧರ್ಮ ಪತ್ನಿ ತನ್ನ ಪತಿದೇವರ ಮೇಲೆ ಸಹೋದ ರತಾ ಭಾವನೆ ಮೂಡಿ ಬರಬೇಕೆಂದು ಅವನ ಕೈಗೆ ರಾಖಿಯನ್ನು ಕಟ್ಟುವ ಸಂಪ್ರದಾಯ ಕೆಲವಡೆಗಳಲ್ಲಿ ಇದೆ.

ಮಾನವನ ಬದುಕು ಹುಟ್ಟಿನಿಂದ ಬಂಧನ ರಹಿತ. ಆದರೆ ಅವನು ಬೆಳೆಯುತ್ತಿದ್ದಂತೆ ಪಾರ ಮಾರ್ಥಿಕ ಹಾಗೂ ಸಂಸಾರಿಕ ಬಂಧನಕ್ಕೆ ಒಳಗಾ ಗುತ್ತಾನೆ, ಸಂಸಾರಿಕ ಬಂಧನ ಅವನನ್ನು ಶೋಕ ಸಾಗರದಲ್ಲಿ ತೇಲಿಸುತ್ತಿದ್ದರೆ ಪಾರಮಾರ್ಥಿಕ ಬಂಧ ನವಾದ ರಕ್ಷಾಬಂಧನ ಅವನ ಬದುಕನ್ನು ಸುಖಿಯ ನ್ನಾಗಿರಿಸುವ ಸಾಧನವೇ ಆಗಿದೆ.

ರಕ್ಷಾಬಂಧನದ ಕಾರ್ಯಕ್ರಮ ಕೇವಲ ರಕ್ತ ಸಂಬಂಧದ ಸಹೋದರ ಸಹೋದರಿಯರಿಗೆ ಮಾತ್ರ ಸೀಮಿತವಾಗಿರುವುದು ಔಚಿತ್ಯ ಪೂರ್ಣವಾ ಗಲಾರದು. ದೇವ ಸಾಮ್ರಾಜ್ಯದ ಸಹೋದರಿಯ ರಾದ ನಾವು ಪರಸ್ಪರರಾಗಿ ರಾಖಿಯನ್ನು ಕಟ್ಟಿಕೊಳ್ಳ ಬಹುದಾಗಿದೆ.

## ರಕ್ಷಾಬಂಧನ ಪ್ರಭೇದ :

ಪುರೋಹಿತರ ಮೂಲಕ ಕೆಲವಡೆಗಳಲ್ಲಿ ರಾಖಿ ಯನ್ನು ಕಟ್ಟಿಕೊಳ್ಳುವುದರ ತಾತ್ಪಾರ್ಯವೆಂದರೆ ಪ್ರಾಚೀನ ಕಾಲದಲ್ಲಿ ಪರಿಪೂರ್ಣರಾಗಿ ಬ್ರಹ್ಮಚಾರಿ ಗಳಾಗಿ ಇರುತ್ತಿದ್ದ ಬ್ರಾಹ್ಮಣರು ತಾವೂ ಪವಿತ್ರರಾಗಿ, ಅನ್ಯರಿಗೂ ಪವಿತ್ರರಾಗಲು ಆಣೆಗೊಳಿಸುತ್ತಿದ್ದರು.



ಇದರ ಸಂಸ್ಮರಣಾರ್ಥ ಬ್ರಾಹ್ಮಣರು ರಕ್ಷಾಬಂಧನವನ್ನು ಕಟ್ಟಲಾರಂಭಿಸಿದರು.

ದಕ್ಷಿಣ ಭಾರತದಲ್ಲಿ ಯಜ್ಞೋಪವೀತ ರಾಖೀ ಹಬ್ಬದಷ್ಟೇ ಪವಿತ್ರವಾದದ್ದು ತನ್ನ ಬದುಕಿನುದ್ದಕ್ಕೂ ಪಾವಿತ್ರ್ಯವನ್ನು ಕಾಪಾಡಿಕೊಳ್ಳಲ್ಲೋಸ್ಕರ ಜನಿವಾರ ಧಾರಣೆಯನ್ನು ಮಾಡಿಕೊಳ್ಳುವರು. ನಮ್ಮ ಆತ್ಮವನ್ನು ಹೀನಗೊಳಿಸುವ ಕಾಮಕ್ರೋಧ ಲೋಭಗಳ ಅಸುರಿ ಶಕ್ತಿಗಳ ಸಂಹಾರಕ್ಕಾಗಿಯೇ ಮೂರು ಹಸಿ ನೂಲಿನ ಎಳೆಯದಾರವನ್ನು ತೊಡಲಾಗುವುದು.

ಅನಿಷ್ಟಗಳನ್ನು ದಮನಿಸಿ ಸಿದ್ಧಿಯನ್ನು ಪಡೆಯಲು ವೀರಶೈವರು ಶಿವ ದೀಕ್ಷೆಯನ್ನು ಹೊಂದುವಾಗ ಶಿವದಾರ ಹಾಗೂ ಶಿವಲಿಂಗವನ್ನು ತೊಡುವರು. ಸದಾಚಾರ ಸಂಸ್ಕೃತಿಯನ್ನು ಒಡಮೂಡಿಸಿಕೊಳ್ಳಲು ಧರಿಸುವ ಈ ಶಿವದಾರ ರಕ್ಷಾಬಂಧನದ ಸಂಕೇತವೇ ಆಗಿದೆ.

ಹೆತ್ತ ಮಗಳಿಗೆ ವಿವಾಹ ಸಂದರ್ಭದಲ್ಲಿ ವರನಿಗೆ ಧಾರೆ ಎರೆದುಕೊಡುವಾಗ ವಧುವರರಿಬ್ಬರೂ ಅಜೀವಪರ್ಯಂತ ಸ್ನೇಹ ಜೀವಿಗಳಾಗಿ ಬಾಳುವಂತಾಗಲು ಗುರು ಹಿರಿಯರ ಸಮ್ಮುಖದಲ್ಲಿ ದೇವರ ಹೆಸರಿನಲ್ಲಿ ರಕ್ಷಾ ಕಂಕಣವನ್ನ ಕಟ್ಟುವುದು ರಕ್ಷಾಬಂಧನವೇ ಆಗಿದೆ; ಸಹೋದರಿಯ ಸಂಸಾರಿಕ ಜೀವನಕ್ಕೆ ಇದು ಶ್ರೀ ರಕ್ಷೇ ಆಗಿರುವುದು.

ಯಜ್ಞಯುಗಾದಿಗಳನ್ನು ಆಚರಿಸುವಾಗ ತೊಡುವ ಶುಭ ರೇಶ್ಮೆ ಬಟ್ಟೆ ರಕ್ಷಾಬಂಧನದ ಸಂಕೇತ. ಕಾಮ ಕ್ರೋದಾದಿ ವಿಕಾರಗಳಲ್ಲಿ ಸಿಲುಕಿಸಿಕೊಳ್ಳದೇ ಬ್ರಹ್ಮಚರ್ಯ ವ್ರತದಿಂದ ನಮ್ಮ ಆತ್ಮವನ್ನೇ ಪವಿತ್ರ ಗೊಳಿಸಬೇಕೆಂದು ಧರಿಸಿದ ಶುಭ್ರ ರೇಷ್ಮೆಬಟ್ಟೆ ಕರೆಯನ್ನು ನೀಡುವುದು.

## ಮನುಕುಲದ ರಕ್ಷಾ ಕವಚ ರಾಖಿ :

ರಕ್ಷಾಬಂಧನವಾದ ನಂತರ ಹಣೆಗೆ ತಿಲಕವನ್ನಿಟ್ಟು ಸಿಹಿ ತಿಂಡಿಯನ್ನುಣ್ಣಿಸುವ ಕಾರ್ಯಕ್ರಮ. ಶ್ರೀ ಗಂಧದ ತಿಲಕ ಆತ್ಮದ ಒಡೆಯನಾಗಿರುವ ಪರಮಾತ್ಮನ ಸಂಕೇತವೇ ಆಗಿದೆ. ದೇವೀ ಗುಣಗಳನ್ನು ನಮ್ಮಲ್ಲಿ ಅಳವಡಿಸಿಕೊಂಡು ಅನ್ಯರಲ್ಲೂ ಆ ಗುಣ ಒಡಮೂಡುವಂತಾಗಲು ನಾವು ಶ್ರಮಿಸಬೇಕೆನ್ನುವುದು ಇದರ ತಾತ್ಪರ್ಯ. ಪರಮಾತ್ಮ ಹಾಗೂ ಸಕಲರಿಗೂ ನಾವು ಪ್ರಿಯರಾಗಿ ಬಾಳ ಬೇಕೆನ್ನುವ ಉದ್ದೇಶದಿಂದ ಸಿಹಿ ತಿಂಡಿಯನ್ನು ಈ ಪರ್ವ ಕಾಲದಲ್ಲಿ ಉಣಿಸಲಾಗುತ್ತಿದೆ.

ಧರ್ಮ ರಕ್ಷಣೆ ಶರೀರ ರಕ್ಷಣೆ ಹಾಗೂ ನೀತಿ ರಕ್ಷಣೆಯ ಹಿನ್ನೆಲೆಯಲ್ಲಿ ರಾಖಿ ಕಾರ್ಯಕ್ರಮ ನಡೆದುಬಂದಿತು, ಪ್ರಾಚೀನ ಕಾಲದಲ್ಲಿ ತಮ್ಮ ಶೀಲವನ್ನು ವೈರಿಗಳಿಂದ ರಕ್ಷಿಸಲ್ಪಡಬೇಕೆಂದು ಸಹೋದರಿಯರು ರಕ್ಷಾಬಂಧನವನ್ನು ಸಹೋದರರಿಗೆ ಕಟ್ಟುತ್ತಿದ್ದರು. ಸಹೋದರರು ಆಗ ವಿರೋಚಿತ ಪಣವನ್ನೇ ಸಹೋದರಿಯರಿಗಾಗಿ ತೊಡಬೇಕಾಗುತ್ತಿತ್ತು. ಇಂದು ಪ್ರತಿಜ್ಞೆಯ ಪ್ರತೀಕವಾಗಿ ರಕ್ಷಾಬಂಧನವನ್ನು ಕಟ್ಟಿಕೊಂಡು ಸಹೋದರ ಸಹೋದರಿಯರು ಶುದ್ಧ ದೃಷ್ಟಿ ಶುದ್ಧ ವೃತ್ತಿಯನ್ನು ಪಾಲಿಸಲು ಕಂಕಣ ಬದ್ಧರಾಗಬೇಕು.

ವಿಶ್ವದಲ್ಲಿ ತಲೆದೋರುತ್ತಿರುವ ಭ್ರಷ್ಟಾಚಾರ, ಜಾತೀಯತೆ, ಕೋಮುಗಲಭೆ ಹಾಗೂ ಸ್ವಜನ ಪಕ್ಷಪಾತಗಳ ವಿರುದ್ಧ ನಾವು ಸಾಮೂಹಿಕ ಸಮರವನ್ನೇ ಹೂಡಲು ರಾಖೀ ಹಬ್ಬಕ್ಕೆ ಸಾರ್ವಜನಿಕ ನೆಲೆಯಲ್ಲಿ ಜ್ಯಾತ್ಯಾತೀತ ಸ್ವರೂಪವನ್ನೇ ನೀಡಿ ವಿಶ್ವ ಸಹೋದರತೆಯ ವಾತಾವರಣವನ್ನೇ ಮೂಡಿಸಬೇಕಾಗಿದೆ.

# ಮಂಚಾಲೆಯ ಮಾಂತ್ರಿಕ

"ಪೂಜ್ಯಾಯ ರಾಘವೇಂದ್ರಾಯ ಸತ್ಯಧರ್ಮ ರತಾಯಚ ಭಜತಾಂ ಕಲ್ಪವೃಕ್ಷಾಯ ನಮತಾಂ ಕಾಮಧೇನವೇ" ಸದಾ ಸತ್ಯ ಧರ್ಮಗಳ ಅನುಷ್ಠಾನದಲ್ಲಿ ನಿರತರಾದ, ಭಜಕರ ಪಾಲಿಗೆ ಕಲ್ಪವೃಕ್ಷ, ನಮಿಸಿದವರಿಗೆ ಕಾಮಧೇನುವಾಗಿ ಅವರ ಬಯಕೆಗಳನ್ನು ಪೂರೈಸುವ ಮಂತ್ರಾಲಯ ಪ್ರಭುಗಳಾದ ರಾಘವೇಂದ್ರ ಗುರುವರರೇ ನಿಮಗಿದೋ ವಂದನೆಗಳು. ಈ ಕಲಿಯುಗದಲ್ಲಂತು ದೇವರೆಂದರೆ ತಿರುಪತಿ ತಿಮ್ಮಪ್ಪ, ಗುರುಗಳೆಂದರೆ ಮಂಚಾಲೆ ರಾಘಪ್ಪ ಎಂಬುದು ಜನಜನಿತವಾಗಿದೆ. ಮೇಲಾಗಿ ಇದು ಇಂದು ನಾವು ಕಾಣುವ ನಿತ್ಯ ಪ್ರತ್ಯಕ್ಷ ಸತ್ಯ. ಏಕೆಂದರೆ ತಮ್ಮ ಜೀವನದಲ್ಲಿ ನೊಂದು, ಬೆಂದ ಜನರು ಕಷ್ಟಗಳ ಪರಿಹಾರಕ್ಕಾಗಿ ಜೀವನದಲ್ಲಿ ಶಾಂತಿ, ನೆಲೆ, ಸಂತಸಗಳನ್ನು ಕಾಣಲು ಸಹಸ್ರ ಸಂಖ್ಯೆಯಲ್ಲಿ ತಿರುಪತಿ, ಮಂತ್ರಾಲಯಗಳನ್ನು ಕುರಿತು ಸಂಚರಿಸಿ ಶ್ರೀ ದೇವರ ಮತ್ತು ಗುರುಕಾರುಣ್ಯದಿಂದ ಸೂಕ್ತ ಮಾರ್ಗದರ್ಶನ, ಪರಿಹಾರಗಳನ್ನು ಕಂಡು ಸಂತಸಭರಿತರಾಗಿ ಹಿಂದಿರುಗುತ್ತಾರೆ. ಮಂತ್ರಾಲಯದ ಪ್ರಭುಗಳ ಮಹಿಮೆಯು ಅಸಾಧಾರಣವಾದುದು. ಹಿಂದೆ ಪ್ರಹ್ಲಾದನಾಗಿ ಇವರು ಗಾಢಭಕ್ತಿಯಿಂದ ಬೇಡಲು ಭಕ್ತ ಪರಾಧೀನನಾದ ಶ್ರೀ ಹರಿಯು ನರಹರಿಯಾಗಿ ಕಂಭದಲ್ಲಿ ಪ್ರಕಟಗೊಳ್ಳುವನು. ಹಿರಣ್ಯಕಶಿಪುವನ್ನು ಕೊಂದು, ಪ್ರಹ್ಲಾದನನ್ನು ವರಬೇಡೆಂದು ಶ್ರೀಹರಿಯು ಕೇಳಲು ಪ್ರಹ್ಲಾದನು ತನಗೆ ಮಾತ್ರ ಮೋಕ್ಷಾದಿ ಸಿದ್ಧಿಗಳನ್ನು ಕೇಳದೆ, ತನ್ನ ಮಿತ್ರರಿಗೂ, ಸಹಪಾಠಿಗಳಿಗೂ ಸನ್ಮತಿ ಮತ್ತು ಸದ್ಗತಿಗಳನ್ನು ನೀಡೆಂದು ನರಹರಿಯನ್ನು ಪ್ರಾರ್ಥಿಸುವನು. ಅದಕ್ಕೆ ಶ್ರೀಹರಿಯು ಒಪ್ಪುವನು. ಆದರೆ ಪ್ರಹ್ಲಾದನ ಪುಣ್ಯದ ಕೊಡ ಅಲ್ಲಿಗೆ ತುಂಬಲಿಲ್ಲ. ಮುಂದೆ ಮಧ್ವಮತದ ದೊಡ್ಡ ಆಧಾರ ಸ್ತಂಭರಾಗಿ, ವ್ಯಾಸರಾಜರಾಗಿ ಅವತಾರವೆತ್ತಿ ತರ್ಕ ತಾಂಡವ, ಚಂದ್ರಿಕಾ, ನ್ಯಾಯಾಮೃತ ಮುಂತಾದ ಉದ್ಗ್ರಂಥಗಳನ್ನು ಸಹಸ್ರಾರು ಸಂಖ್ಯೆಯಲ್ಲಿ "ಸಿರಿಕೃಷ್ಣ" ಅಂಕಿತದಲ್ಲಿ ಕನ್ನಡದಲ್ಲಿ ಭಕ್ತಿಗೀತೆಗಳನ್ನು ರಚಿಸಿ, ಪಂಡಿತ, ಪಾಮರರಿಬ್ಬರಿಗೂ ಶಾಸ್ತ್ರದೇಗುಲದ ಬಾಗಿಲನ್ನು ತೆಗೆದಿರಿಸಿದರು. ವಿಜಯನಗರದ ದೊರೆ ಕೃಷ್ಣ ದೇವರಾಯನಿಗೆ ರಾಜ ಗುರುವಾಗಿ ಸೂಕ್ತ ಸಲಹೆ ಮಾರ್ಗದರ್ಶನಗಳನ್ನು ನೀಡಿದರು. ಕ್ರಿ.ಶ. ೧೪೪೬ರ ವರೆಗೆ ೧೨ ವರ್ಷಗಳ ಪರ್ಯಂತ ಶ್ರೀ ತಿರುಮಲೇಶನ ಪೂಜೆಗೈದರು. ಇಂದಿಗೂ ಶ್ರೀ ವ್ಯಾಸರಾಜರ ಆಹ್ನಿಕ ಮಂಟಪವನ್ನು ತಿರುಮಲೆಯ ಸ್ವಾಮಿ ಪುಷ್ಕರಣಿಯ ಉತ್ತರಭಾಗದಲ್ಲಿ ಕಾಣಬಹುದು. ಹೀಗೆ ಪುಣ್ಯ ಬಾಹುಳ್ಯದಿಂದ ಮೆರೆಯುತ್ತಿರುವ ಚಂದ್ರಿಕಾಚಾರ್ಯರು (ವ್ಯಾಸರಾಜರು) ಶ್ರೀನಿವಾಸನ ಕೃಪೆಯಿಂದ ಮತ್ತೆ ರಾಘವೇಂದ್ರ ಗುರುಗಳಾಗಿ ಅವತರಿಸಿ ವೈದಿಕ ಆಗಸದಲ್ಲಿ ಪ್ರಕಾಶಮಾನವಾದ ತಾರೆಯಾಗಿ ಬೆಳಗಿದರು. ಗುರುಗಳು ಮೋಕ್ಷಾರ್ಹರಾಗಿದ್ದರೂ, ತಮ್ಮ ಸಂಚಿತ ಪುಣ್ಯದ ಭಂಡಾರವನ್ನು ಭಕ್ತರಿಗೆ ಹಂಚಲು ಮಂತ್ರಾಲಯದ ಮೂಲ ಬೃಂದಾವನ ಹಾಗೂ ೪೦೦ ಕ್ಕೂ ಮಿಕ್ಕಿದ ಪ್ರತಿಷ್ಠಿತ ವೃಂದಾವನಗಳಲ್ಲಿ ನೆಲಸಿದ್ದಲ್ಲದೆ, ಭಜಕರನ್ನು ಅವರು ಕರೆದಲ್ಲಿಗೆ ಬಂದು ತಮ್ಮ ಅತೀಂದ್ರಿಯ ಶಕ್ತಿಯಿಂದ ಅನುಗ್ರಹಿಸುತ್ತಿದ್ದಾರೆ.

ಸಶರೀರ ವೃಂದಾವನ ಪ್ರವೇಶಿಸಿದ ಮಾಧ್ವಯತಿಗಳಲ್ಲಿ ವಾದಿರಾಜರು ಮೊದಲಿಗರಾಗಿದ್ದಾರೆ; ರಾಘವೇಂದ್ರರು ದ್ವಿತೀಯರು. ವೇದವ್ಯಾಸರು ರಚಿಸಿದ ಬ್ರಹ್ಮಸೂತ್ರಕ್ಕೆ ಆಚಾರ್ಯ ಮಧ್ವರು ಅನುವ್ಯಾಖ್ಯಾನವನ್ನು ಬರೆದರು. ಜಯತೀರ್ಥರು, ಅನುವ್ಯಾಖ್ಯಾನದ ಮೇಲೆ ಸುಧಾಗ್ರಂಥವನ್ನು ರಚಿಸಿ ಟೀಕಾಚಾರ್ಯರೆಂದು ಹೆಸರು ಪಡೆದರು. ರಾಘವೇಂದ್ರರು ಸುಧಾಗ್ರಂಥದ ಮೇಲೆ ಪರಿಮಳವೆಂಬ ಗ್ರಂಥ ಬರೆದು, ವೇದವ್ಯಾಸರ ಬ್ರಹ್ಮ ಸೂತ್ರಗಳನ್ನು ಬಹ



# ತಿ. ತಿ. ದೇವಸ್ಥಾನಗಳು, ತಿರುಪತಿ

# ಪ್ರಕಟನ ಶಾಖೆ

## ಮಾರಾಟಕ್ಕೆ ಸಿದ್ಧವಾಗಿರುವ ಅಮೂಲ್ಯ ಧಾರ್ಮಿಕ ಗ್ರಂಥ ರಾಶಿ

### *ಕನ್ನಡ :*

ಶ್ರೀನಿವಾಸನ ಹಾಡುಗಳು--ಭಾಗ--೨ (ಶ್ರೀಪಾದರಾಜರು,
ವ್ಯಾಸರಾಯರು, ವಾದಿರಾಜರು, ಕನಕದಾಸರು) 4--30

ಸೃಷ್ಟಿಪ್ರಕರಣ (ದಾಸಸಾಹಿತ್ಯದಲ್ಲಿ ವಿವರಿಸಿದಂತೆ)
--ವಿ. ಬಾದರಾಯಣ ಮೂರ್ತಿ 12--50

ಪುರಂದರೋಪನಿಷತ್ (ಪುರಂದರದಾಸರ ಏಳು ಕೃತಿ ವಿವರಣೆ)
--ಬನ್ನಂಜೆ ಗೋವಿಂದಾಚಾರ್ಯ 7--00

ಕೇಶವಾದಿ ರೂಪಗಳು (ಕನ್ನಡ, ತೆಲುಗು, ಆಂಗ್ಲ,
ಹಿಂದಿ, ಚಿತ್ರವಿವರಣೆ) --ಸಂ. ಕೆ. ಅಪ್ಪಣ್ಣಾಚಾರ್ಯ 3--75

ಕರ್ನಾಟಕ ಹರಿದಾಸರು (ಕನ್ನಡ, ತೆಲುಗು, ಆಂಗ್ಲ,
ಹಿಂದಿ, ಚಿತ್ರವಿವರಣೆ) --ಸಂ. ಕೆ. ಅಪ್ಪಣ್ಣಾಚಾರ್ಯ 2--25

ಸ್ತೋತ್ರ ಕುಸುಮಮಾಲಾ --ಸಂ. ವೆಂಕಟಾಚಲ 3--00

ಆಚಾರಗಳು ಆಡಂಬರಗಳು --ಕೆ. ಚಂದ್ರಮೌಳಿ 0--40

ಶ್ರೀ ವೆಂಕಟೇಶ್ವರ ಸುಪ್ರಭಾತ (ವಿವರಣೆ ತಾತ್ಪರ್ಯ) ೨--50

" " (ಕನ್ನಡ ಲಿಪಿಯಲ್ಲಿ) 0--12

### *ಮಕ್ಕಳಿಗಾಗಿ :*

ಶ್ರೀಪಾದರಾಜರು --ಎಂ. ಎಸ್. ಗುಂಡೂರಾವ್ 0--75

ಮಹಿಪತಿದಾಸರು --ಶಾನಭಾಗ 0--85

ಪ್ರಸನ್ನ ವೆಂಕಟದಾಸರು --ವಿ. ಬಾದರಾಯಣಮೂರ್ತಿ 0--80

ಗೋಪಾಲದಾಸರು --ರುಕ್ಮಿಣಿಗಿರಿಮಾಜಿ 0--75

### *ಹಿಂದಿ :*

ಶ್ರೀ ವೆಂಕಟೇಶ್ವರ ಜೀ ಕೆ ಸುಪ್ರಭಾತ್ ಸ್ತೋತ್ರ
--ಡಾ. ಎಂ. ಸಂಗಮೇಶಂ 0--20

ಶ್ರೀ ವೇಂಕಟೇಶ್ವರ ಸುಪ್ರಭಾತ್ (ಸಚಿತ್ರ) 11--00

ತೀರ್ಥರಾಜ ತಿರುಪತಿ --ಡಾ. ಎಂ. ಸಂಗಮೇಶಂ 1--50

### *ಸಂಸ್ಕೃತ :*

ಶ್ರೀ ವೇಂಕಟೇಶ್ವರ ಸುಪ್ರಭಾತಂ 0--12

ಶ್ರೀ ವೇಂಕಟೇಶ್ವರ ಅಷ್ಟೋತ್ತರ ಸಹಸ್ರನಾಮ ಸ್ತೋತ್ರಾಣಿ 0--62

ಕಠೋಪನಿಷತ್ --ಡಾ. ಕೆ. ಸಿ. ವರದಾಚಾರಿ ಹಾಗೂ
--ಡಾ. ಡಿ. ತಾತಾಚಾರ್ಯ 15--00

ಮಾರ್ಕಂಡೇಯ ಸಂಹಿತಾ 18--00

ತತ್ತ್ವಸಂಖ್ಯಾನಂ -- ಆರ್. ರಾಮಮೂರ್ತಿ ಶರ್ಮಾ 2--00

ಬ್ರಹ್ಮಸೂತ್ರ ಭಾಷ್ಯ (ಭಾಗ--೧)
-- ಆರ್. ರಾಮಮೂರ್ತಿ ಶರ್ಮಾ 30--00

ಅಲಂಕಾರ ಸಂಗ್ರಹ -- ಸಂ--ಕೆ. ಭಾಸ್ಕರರಾವ್ 16--00

ಸೀತಾರಾಮಾಂಜನೇಯಂ
--ಡಾ. ಡಿ. ಅರ್ಕಸೋಮಯಾಜಿ 50--00

ಪ್ರಶ್ನೋಪನಿಷತ್ 11--00

ಶ್ರೀಮತ್ ವೈಖಾನಸೇ ಭಗವಚ್ಛಾಸ್ತ್ರೇ ಕ್ರಿಯಾಧಿಕಾರಃ
--ಸಂ--ಡಾ. ಎಸ್. ಬಿ. ರಘುನಾಥಾಚಾರ್ಯ 25--00

1000 ರೂಗಳನ್ನು ಮೀರಿದ ಪುಸ್ತಕಗಳ ಕೊಳ್ಳುವಿಕೆಗೆ 30 ಶತಾಂಶ ರಿಯಾಯಿತಿಯೂ, 500 ರೂಗಳಿಂದ 1000ರೂ.ವರೆಗೆ 25 ಶತಾಂಶ ರಿಯಾಯಿತಿಯೂ, 100 ರೂ.ಗಳಿಂದ 500 ರೂ.ವರೆಗೆ 15 ಶತಾಂಶ ರಿಯಾಯಿತಿಯೂ ಉಂಟು.

ಅಂಚೆವೆಚ್ಚ ಪ್ರತ್ಯೇಕ.

ಕೂಡಲೇ ಬರೆಯಿರಿ :

***ಸೇಲ್ಸ್‌ವಿಂಗ್ ಆಫ್ ಪಬ್ಲಿಕೇಷನ್ಸ್,***

ತಿ. ತಿ. ದೇ. ತಿರುಪತಿ.

ಳಷ್ಟು ಸರಳೀಕರಿಸಿ "ಪರಿಮಳಾಚಾರ್ಯ"ರೆಂದು ಪ್ರಸಿದ್ಧರಾದರು. ರಾಘವೇಂದ್ರರನ್ನು ಅವರ ವೃಂದಾವನದಲ್ಲಿ ಪ್ರತ್ಯಕ್ಷ ಕಂಡು, ಸಂಭಾಷಿಸಿಸಿದ ಜಗನ್ನಾಥ ದಾಸರು ರಾಘವೇಂದ್ರರ ಮಹಿಮೆಯನ್ನು ತಾವು ರಚಿಸಿದ ೭೦ ಕ್ಕೂ ಹೆಚ್ಚಿನ ಪದ್ಯಗಳಲ್ಲಿ ಬಹಳಷ್ಟು ಕೊಂಡಾಡಿದ್ದಾರೆ. ಕುಷ್ಟ ಮೊದಲಾದ ದುಷ್ಟರೋಗಗಳನ್ನು ಅಷ್ಟದಾರಿದ್ರ್ಯದ ಅತಿ ಕಷ್ಟಗಳನ್ನೂ ದೃಷ್ಟಿಹೀನರಿಗೆ ಸುದೃಷ್ಟಿಯನ್ನೂ ನೀಡಿ ಈ ಸೃಷ್ಟಿಯಲ್ಲಿ ರಾಯರು, ಶ್ರೇಷ್ಠರಾಗಿ ಮೆರೆಯುತ್ತಿದ್ದಾರೆನ್ನುತ್ತಾರೆ. "ಮುನಿ ಕುಲರನ್ನು ಮಾನ ನಿಧಿಯೇ ಎನ್ನ ಭಿನ್ನಪವ ಕೇಳಿ ಬಂದ ಜನ ರಘು ವೃಂದ ಕಳೆದು ಆನಂದ ನೀಡು" ಎಂದು ಅಂಗಲಾಚಿದ್ದಾರೆ. "ಕೃಷ್ಣವರ್ಣದಿ ಶೋಭಿಪನ ವೈಷ್ಣವ ಕುಮುದ ನಿಕರ ಚಂದಿರನ ವಿಷ್ಣು ಭಕ್ತಾಗ್ರೇಸರನ ಬಾಲ ಕೃಷ್ಣಮೂರ್ತಿ ಭಜಕನಾದ ರಾಘವೇಂದ್ರರನ್ನು ಭಜಿಸಿರೆ"ನ್ನುತ್ತಾರೆ. ಮಧ್ವಮತ ಶುಭವಾರ್ಧಿಚಂದ್ರಗೆ ಸಿದ್ಧಸಾಧನ ಮೂರ್ತಿಗೆ ಬದ್ಧ ಶ್ರೀ ಹರಿದ್ವೇಷಿಗಳ ಗೆದ್ದ ರಘುಕುಲರಾಮ ದೂತಗೆ ವಂದಿಸು ಎನ್ನುತ್ತಾರೆ. "ಋಷಿಗಳೊಳು ನಿನಗುಪಮೆ ಕಾಣೆನೋ ಕೃಪಾ ವತ್ಸಲ ಶ್ರೀ ಶ್ರೀ ರಾಘವೇಂದ್ರಾ" ಎನ್ನುತ್ತಾರೆ. "ತುಂಗಾ ತೀರ ನಿವಾಸ, ಮಂತ್ರಾಲಯ ತೀರ, ತುಂಗ ವಿಕ್ರಮ ಶ್ರೀ ಹರಿವಾಸ" ಎಂದು ಕೊಂಡಾಡುತ್ತಾರೆ. "ಮರುತಾಂಶರು ಉರಗಾಂಶರನ್ನ -- ಪ್ರಹ್ಲಾದ -- ಲಕ್ಷ್ಮಣ -- ಬಾಹ್ಲಿಕ -- ವ್ಯಾಸನು, ಇಲ್ಲೀಗ ರಾಘವೇಂದ್ರ" ಎನ್ನುತ್ತಾರೆ. "ಕಾಮಿತ ಫಲಪ್ರದ, ಪ್ರೇಮದಿ ನಿನ್ನಯ, ನಾಮವ ನೆನೆವಂತೆ ಮಾಡು ಎನ್ನುತ್ತಾರೆ". "ದಯಾನಿಧೇ ಶ್ರೀ ರಾಘವೇಂದ್ರ ಗುರುವೇ ಕಾಮಿತ ಸುರತರುವೆ, ಜ್ಞಾನಿಗಳರಸನೆ, ಧ್ಯಾನಿಪಜನರಿಗೆ ಜ್ಞಾನವ ಪಾಲಿಸೊ" ಎಂದು ಬೇಡುತ್ತಾರೆ. "ಪಾಪಿಗಳೊಳಗೆ ಹಿರಿಯನು ನಾನು, ನಿಷ್ಪಾಪಿಗಳರಸನೆ ಗುರುರಾಯ ಅಪಾರ ಜನುಮದಿ ಬಂದಿಹ ತಾಪತ್ರಯಗಳ ಕಳೆ ಮಹರಾಯಾ" ಎನ್ನುತ್ತಾರೆ. "ಶೇಷಾಂಶ ಪ್ರಹ್ಲಾದ ರಾಯಾ ಎನ್ನ ದೋಷವೆಣಿಸದೆ ಕಾಯೋ ಜೀಯಾ" ಎಂದು ಬೇಡುತ್ತಾರೆ.

ರಾಘವೇಂದ್ರರು ವೃಂದಾವನಸ್ಥರಾದ ಮೇಲೂ ಜಗನ್ನಾಥದಾಸರಿಗೆ ಪ್ರತ್ಯಕ್ಷ ದರ್ಶನ ನೀಡುತ್ತಿದ್ದರು. ಹೀಗಾಗಿ ಅವರಿಗೆ ತಮ್ಮ ಪ್ರತ್ಯಕ್ಷ ಅನುಭವಗಳನ್ನು ಅನೇಕ ಪದ್ಯಗಳ ಮೂಲಕ ತಿಳಿಸಲು ಅನುಕೂಲವಾಯಿತು. ಆದರೆ ಜಗನ್ನಾಥ ದಾಸರಿಗೆ, ಈ ವಿಷಯವನ್ನು ಇತರರಿಗೆ ತಿಳಿಸಬಾರದೆಂದು ಗುರುರಾಜರ ಆಜ್ಞೆಯಿತ್ತು. ಹೀಗಾಗಿ ಜಗನ್ನಾಥದಾಸರಿಗೆ ರಾಯರ ವೃಂದಾವನ ಕಾಣಿಸದೇ ರಾಯರೇ ಪ್ರತ್ಯಕ್ಷರಾಗಿ ನೇರ ಸಂಭಾಷಣೆ ನಡೆಸುತ್ತಿದ್ದರು. ಆದರೆ ಈ ವಿಷಯವನ್ನು ಬಹಳ ದಿನ ಗೋಪ್ಯವಾಗಿಡದೆ ಜಗನ್ನಾಥ ದಾಸರು "ಎದ್ದು ಬರುತ್ತಾರೆ ನೋಡೆ ತಾವೆದ್ದು ಬರುತ್ತಾರೆ, ಮುದ್ದು ಬೃಂದಾವನದ ಮಧ್ಯದೊಳಗಿದ್ದು ತಿದ್ದಿ ಹಚ್ಚಿದ ನಾಮ ಮುದ್ರೆಗಳೊಪ್ಪುತೀಗ" ಇತ್ಯಾದಿ ಪದ್ಯಗಳಿಂದ ಬಹಿರಂಗಗೊಳಿಸಿದ್ದರಿಂದ ಮುಂದೆ ಸಾಕ್ಷಾತ್‌ದರ್ಶನ, ಸಂಭಾಷಣೆ ಭಾಗ್ಯಗಳಿಂದ ವಂಚಿತರಾಗಿ ಕೇವಲ ಸ್ವಪ್ನ ಸಂಭಾಷಣೆಗಳನ್ನು ನಡೆಸಬೇಕಾಗಿ ಬಂತು.

ಒಮ್ಮೆ ರಾಯರು ತಮ್ಮ ಚಾತುರ್ಮಾಸ ವ್ರತವನ್ನು ರಾಯಚೂರಿನ ಮಾನ್ವಿಯಲ್ಲಿರುವ ಪ್ರಾಣದೇವರ ಗುಡಿಯಲ್ಲಿ ಕೈಗೊಂಡರು. ಆಗ ರಾಮ ದೇವರ ಪೂಜೆ ಹಾಗೂ ರಾಯರದರ್ಶನಕ್ಕೆ ಅಪಾರ ಜನ ಸಮೂಹ ಬರುತ್ತಿತ್ತು. ಒಮ್ಮೆ ಹೀಗೆ ಬಂದವರು ಯಮಾಂಶರಾದ ವೃದ್ಧ ಕನಕದಾಸರೂ ಇದ್ದರು. ಇಲ್ಲಿಗೇಕೆ ಬಂದೆ ಎಂದು ಕನಕನನ್ನು ರಾಯರು ಕೇಳಲು "ಹಿಂದಿನಂತೆ ನನಗೆ ಗತಿ ಕಾಣಿಸಿರಪ್ಪಾ" ಎಂದು ರಾಯರ ಮುಂದೆ ಸಾಷ್ಟಾಂಗ ಬೀಳುವನು. ಕನಕ ಮತ್ತೆ ರಾಯರ ಆಶೀರ್ವಾದ ಪಡೆಯಲು ಬಂದಿದ್ದಾನೆ. ಪೂರ್ವಜನ್ಮದಲ್ಲಿ ಪಂಡಿತರ ಸಭೆಯಲ್ಲಿ ವ್ಯಾಸರಾಜರು ಯಾರು ಮೋಕ್ಷಾರ್ಹರೆಂದು ಕೇಳಲು ಎಲ್ಲರೂ ಉತ್ತರಿಸಲು ಅಸಮರ್ಥರಾದಾಗ ಕನಕನು ಎಲ್ಲರೂ ಅಚ್ಚರಿಗೊಳ್ಳುವಂತೆ ಸ್ಪಷ್ಟವಾಗಿ "ನಾನು ಹೋದರೆ ಹೋದೇನು" ಎನ್ನುವನು, ಅಂದರೆ ಅಹಂಭಾವ ತ್ಯಜಿಸಿದವನೇ ಮೋಕ್ಷಾರ್ಹ ಎಂಬ ದಿವ್ಯ ಸತ್ಯವನ್ನು ಕನಕನ ಮೂಲಕ ತೋರಿಸುತ್ತಾರೆ. ಇಷ್ಟಲ್ಲದೆ ವ್ಯಾಸರಾಜರು ಕನಕಸಮೇತ ಮಠದೆಲ್ಲಾ ಶಿಷ್ಯರಿಗೆ ಕದಳಿದ್ವಯಗಳನ್ನು ನೀಡಿ ಯಾರೂ ಆದರೆ ಸ್ಥಳದಲ್ಲಿ ತಿನ್ನಲೆಂದು ನೀಡುವರು. ಎಲ್ಲಾ ಶಿಷ್ಯರು ಗುಟ್ಟಾಗಿ ಕದವಿಕ್ಕಿ ಕದಳಿ ತಿಂದು ಬರುವರು. ಆದರೆ ಕನಕನು ಮಾತ್ರ ಕದಳಿ ತಿನ್ನಲಾರದೆ ಗುರುಗಳೆದುರು ಬಂದು ದೇವನಿಲ್ಲದ ನೆಲೆಯಿಲ್ಲ ಆದ್ದರಿಂದ ಅವನ ಕಣ್ಣು ತಪ್ಪಿಸಿ ಕದಳಿ ತಿನ್ನಲಸಾಧ್ಯ"ವೆನ್ನುವನು. ಇಲ್ಲಿ ಕನಕನ ಭಕ್ತಿಯ ಗರಿಮೆ ಹಾಗೂ ವೈಷ್ಣವ ದೀಕ್ಷೆ ಯನ್ನು ಪ್ರಕಟ ಪಡಿಸುವುದೇ ವ್ಯಾಸರಾಜರ ಉದ್ದೇಶ. ಈಗ ಅವರೇ ರಾಯರಾಗಿ ಕನಕನೊಡನೆ, ಮೂಲರಾಮ ದೇವರಿಗೆ ಏನಾದರೂ ಅರ್ಪಿಸು ಎನ್ನಲು, ತನ್ನಲ್ಲಿರುವ ಸಾಸಿವೆಯನ್ನು ನೀಡುವನು. ಆಗ ರಾಯರು ಆ ಸಾಸಿವೆಯನ್ನು ಅದು ವ್ರತಕಾಲವಾದಾಗ್ಯೂ ಮೂಲ ರಾಮ ದೇವರ ಅಡುಗೆಗೆ ಉಪಯೋಗಿಸುವಂತೆ ಮಠದ ದೀವಾನರಿಗೆ ಸೂಚಿಸುತ್ತಾರೆ. ರಾಯರ ಉದ್ದೇಶ ಕನಕನಿಗೆ ಅನುಗ್ರಹ ಮಾಡುವುದಾಗಿದೆ. ಅಂದಿನಿಂದ ರಾಯರ ಮಠದಲ್ಲಿ ವ್ರತಕಾಲದಲ್ಲಿ ಸಾಸಿವೆಯ ಅಡುಗೆ ಸೇವನಾರ್ಹ.

ಮಾನ್ವಿಯಲ್ಲಿ ಚಾತುರ್ಮಾಸ ಮುಗಿಸಿ ರಾಯರು ಮುಂದೆ ಕಡನಾಲಿ ಎಂಬ ಗ್ರಾಮಕ್ಕೆ ಬರಲು ವೆಂಕಣ್ಣನೆಂಬ ನಿರಕ್ಷರಕುಕ್ಷಿಯು ಗುರುಗಳಿಗೆ ವಂದನೆ ಮಾಡಿ ತನ್ನನ್ನು ಅನುಗ್ರಹಿಸಬೇಕೆಂದು ಬೇಡುವನು. ಆಗ ಗುರುಗಳು ಕಷ್ಟಕಾಲದಲ್ಲಿ ತನ್ನನ್ನು ಸ್ಮರಿಸಬೇಕೆಂದು ಹೇಳಿ ಅಲ್ಲಿಂದ ಮುಂದುವರಿಯುವರು. ಇದಾದ ಕೆಲವೇ ದಿನಗಳಲ್ಲಿ ಅದೋನಿಯ ನವಾಬನ ಅನುಚರರು ದನ ಕಾಯುತ್ತಿರುವ ವೆಂಕಣ್ಣನನ್ನು ಹಿಡಿದೆಳೆದು ರಾಜನೆದುರು ನಿಲ್ಲಿಸಿ ಪತ್ರವೊಂದನ್ನು ಓದಲು ಹೇಳುವರು. ತಾನು ಅನಕ್ಷರಸ್ಥನೆಂದು ವೆಂಕಣ್ಣನು ಸಾರಿ ಹೇಳಿದರೂ ಅವರು ನಂಬುವುದಿಲ್ಲ. ಪತ್ರವನ್ನು ಓದದಿದ್ದಲ್ಲಿ ವೆಂಕಣ್ಣನ ಶಿರಚ್ಛೇದನ ಮಾಡುವುದಾಗಿ ಸಾರುತ್ತಾರೆ. ಭಯಗೊಂಡ ವೆಂಕಣ್ಣನು ಗುರುರಾಯರನ್ನು ಸ್ಮರಿಸಲು ಆ ಪತ್ರವನ್ನು ಸರಿಯಾಗಿ ಓದುವ ಕ್ಷಮತೆಯನ್ನು ರಾಯರು ಕರುಣಿಸುವರು. ಇದರಿಂದ ಪ್ರಸನ್ನನಾದ ನವಾಬನು ವೆಂಕಣ್ಣನನ್ನು ಅದೋನಿಯ ದಿವಾನನಾಗಿ ನೇಮಿಸುತ್ತಾನೆ.

ಆಮೇಲೆ ಕಾಲಾಂತರದಲ್ಲಿ ರಾಯರು ಅದೋನಿಗೆ ಬರುವರೆಂದು ತಿಳಿದ ವೆಂಕಣ್ಣನು ಆದೋನಿ ಪಟ್ಟಣವನ್ನು ತಳಿರು ತೋರಣಗಳಿಂದ ಶೃಂಗರಿಸಿ ಸ್ವಾಮಿಗಳನ್ನು ತನ್ನ ಮನೆಗೆ ಕರೆಸಿ ದೇವರ ಪೂಜೆಗೆ ವ್ಯವಸ್ಥೆ ಮಾಡುವನು. ಆಗ ಆದೋನಿಯ ನವಾಬನಾದ ಸಿದ್ಧಿ ಮಸೂದ್‌ಖಾನನು ತಾನು ಕೂಡಾ ಗುರುಗಳ ದರ್ಶನಕ್ಕಾಗಿ ಬರುವೆನೆನ್ನುವನು. ಹಾಗೆ ಬರುವಾಗ ಗುರುಗಳನ್ನು ಪರೀಕ್ಷಿಸಬೇಕೆಂದು ಬಯಸಿದ ನವಾಬನು, ದೊಡ್ಡ ಹರಿವಾಣವೊಂದರಲ್ಲಿ ನಿಷಿದ್ಧ ಪದಾರ್ಥಗಳನ್ನಿರಿಸಿ ಅವುಗಳನ್ನು ಬಟ್ಟೆಯಿಂದ ಮುಚ್ಚಿ ಅದನ್ನು ಗುರುಗಳ ಮುಂದಿಟ್ಟು; ಗುರುಗಳಿಗೆ ವಂದಿಸುವನು. ಆಗ ಗುರುಗಳು ತಮ್ಮ ಕಮಂಡಲದಿಂದ ಆ ಹರಿವಾಣದ ಮೇಲೆ ಜಲ ಪ್ರೋಕ್ಷಣೆ ಮಾಡುತ್ತಾರೆ. ಮುಂದೆ ಬಟ್ಟೆ ಸರಿಸಿದ್ದಾಗ ನವಾಬನು ತಂದಿರುವ ಅಪೂಜ್ಯ ಹಾಗೂ ಅಭೋಜ್ಯ ವಸ್ತುಗಳು ಫಲ ಪುಷ್ಪಗಳಾಗಿ ಪರಿವರ್ತನೆಗೊಂಡಿದ್ದವು. ಆಗ ಪಶ್ಚಾತ್ತಾಪಗೊಂಡ ನವಾಬನು ತನ್ನ ಅಪಕಾರವನ್ನು ಮನ್ನಿಸಬೇಕೆನ್ನುವನು. ಮೇಲಾಗಿ ಗುರುಗಳು ತಮಗಿಷ್ಟವಾದುದನ್ನು ಸೂಚಿಸಿದಲ್ಲಿ ಅದನ್ನು ಸೇವಾರೂಪದಲ್ಲಿ ನೀಡುವುದಾಗಿ ತಿಳಿಸುವನು. ಆ ಬಳಿಕ ಗುರುರಾಯರು ವೆಂಕಣ್ಣನೊಡನೆ ವಿಚಾರಿಸಿ ತುಂಗಾ ತಟದಲ್ಲಿರುವ ಮಂಚಾಲೆ ಗ್ರಾಮವನ್ನು ತಮ್ಮ ಅಂತಿಮ ವಿಶ್ರಾಂತಿಗಾಗಿ ಕೇಳಿ ಪಡಕೊಳ್ಳುವರು.

ಒಮ್ಮೆ ಮಠಕ್ಕೆ 3 ಜ್ಯೋತಿಷಿಗಳು ಆಗಮಿಸು

ತ್ತಾರೆ. ಆಗ ರಾಯರು, ಅವರಿಗೆ ಜನ್ಮಕುಂಡಲಿಯೊಂದನ್ನು ನೀಡಿ ತಮ್ಮ ಅಭಿಪ್ರಾಯಗಳನ್ನು ಪ್ರತ್ಯೇಕವಾಗಿ ಪರೀಕ್ಷಿಸಿ ತಿಳಿಸಬೇಕೆಂದು ಹೇಳುತ್ತಾರೆ. ಕುಂಡಲಿಯನ್ನು ಸರಿಯಾಗಿ ಪರೀಕ್ಷಿಸಿದ ಬಳಿಕ ಜ್ಯೋತಿಷಿಗಳು ವಿದ್ವತ್ ಸಭೆಯಲ್ಲಿ ತಮ್ಮ ಅಭಿಪ್ರಾಯಗಳನ್ನು ಮಂಡಿಸುತ್ತಾರೆ.

೧) ಈ ಜನ್ಮಕುಂಡಲೀ ಪ್ರಕಾರ ಸದ್ರಿ ಮಹಾನ್ ವ್ಯಕ್ತಿಗೆ ೧೦೦ ವರ್ಷದ ಪೂರ್ಣಾಯುಷ್ಯವಿದೆ.

೨) ಕುಂಡಲಿಯ ಫಲದಂತೆ ೩೦೦ ವರ್ಷ ಆಯುಷ್ಯ.

೩) ಕುಂಡಲಿ ಪ್ರಕಾರ ೭೦೦ ವರ್ಷ ಪರ್ಯಂತ ಆಯುಷ್ಯ

ಆಗ ಶ್ರೀಮಠದ ಜ್ಯೋತಿಷಿಗಳು ಗಲಿಬಿಲಿಗೊಂಡು ಒಂದೇ ಕುಂಡಲಿಯ ವ್ಯಕ್ತಿಗೆ ೩ ತೆರನ ಆಯುಷ್ಯ ಹೇಗೆ ಸಾಧ್ಯವೆಂದು ತಿಳಿಯಲಾರದೆ ಅಚ್ಚರಿಗೊಳ್ಳುವರು. ಆಗ ರಾಘವೇಂದ್ರರು, ನಸುನಗುತ್ತಾ ಈ ಮೂರು ಭವಿಷ್ಯವಾರಣೆಗಳು ನಿಜವೇ ಇವೆ. ಏಕೆಂದರೆ ಕುಂಡಲೀಪ್ರಕಾರ ಭೂಮಿಯ ಮೇಲಣ ಆಯುಷ್ಯ ೧೦೦ ವರ್ಷ. ೨ನೇ ವಾಣಿಯಂತೆ ಈ ವ್ಯಕ್ತಿ ಬರೆದ ಗ್ರಂಥಗಳ ಪ್ರಚಲಿತ ಆಯುಷ್ಯ ೩೦೦ ವರ್ಷ. ೩ನೇ ನುಡಿಯಂತೆ ಈ ವ್ಯಕ್ತಿ ವೃಂದಾವನದಲ್ಲಿದ್ದು ೭೦೦ ವರ್ಷ ಪರ್ಯಂತ ಸಂಚಿತ ಪುಣ್ಯ ಹಂಚುತ್ತಾ ಆರ್ತೋದ್ಧಾರನಿರತನಾಗುವನು. ಆಗ ಸಭಾಸದರೆಲ್ಲಾ ಇದು ಯಾರ ಜಾತಕವೆಂದು ತಿಳಿಯ ಬಯಸಲು ರಾಯರು ಮೂಲ ರಾಮನ ಅರ್ಚಕರಾದ ತಮ್ಮದೇ ಕುಂಡಲಿ ಎನ್ನುವರು. ಈ ವಿಷಯವನ್ನು ಅನೇಕ ಅಪರೋಕ್ಷ ಜ್ಞಾನಿಗಳು ಹರಿದಾಸರು ಗುರುರಾಯರು ೭೦೦ ವರ್ಷ ಪರ್ಯಂತ ವೃಂದಾವನದಲ್ಲಿದ್ದು ನಮ್ಮೆಲ್ಲರನ್ನು ಅನುಗ್ರಹಿಸುತ್ತಾರೆಂದು ಸಾರಿ ಸಾರಿ ಹೇಳಿದ್ದಾರೆ.

ಗುರುಗಳು ವೃಂದಾವನಸ್ತರಾದ ಕಾಲದಲ್ಲಿ ಭಾರತವು ಬ್ರಿಟಿಷರ ಆಳ್ವಿಕೆಗೆ ಸೇರಿತ್ತು. ಮಂಚಾಲೆ ಆಗ ಬಳ್ಳಾರಿಗೆ ಸೇರಿದ್ದು ಈಗ, ಆಂಧ್ರಪ್ರದೇಶದ ಕರ್ನೂಲು ಜಿಲ್ಲೆಯ ಆದೋನಿ ತಾಲ್ಲೂಕಿಗೆ ಸೇರಿದೆ. ಆಗ ಬಳ್ಳಾರಿಯ ಜಿಲ್ಲಾಧಿಕಾರಿಗಳಾಗಿದ್ದ ಮನ್ರೊ ಎನ್ನುವವರು ಹಿಂದಿನ ರಾಜರು ಸ್ವಸಂತೋಷದಿಂದ ಮಠದೇವಳಗಳಿಗೆ ನೀಡಿದ ದಾನದತ್ತಿಗಳನ್ನು ರದ್ದು ಪಡಿಸಿ ಅದನ್ನು ಪುನಃ ಸರಕಾರಕ್ಕೆ ಸೇರಿಸುವ ಹೊಸ ಕಾನೂನು ತಂದು ದರ ಪ್ರಕಾರ ಮಂಚಾಲೆ ಗ್ರಾಮವನ್ನು ಸರ್ಕಾರಿ ಆಸ್ತಿಯಾಗಿ ಪರಿವರ್ತಿಸಲು ಬಯಸುತ್ತಾರೆ. ಅಲ್ಲದೆ ಆದೋನಿಯ ಶಿರಸ್ತೇದಾರರನ್ನು ಬಳ್ಳಾರಿಗೆ ಕರೆಸಿ ವೃಂದಾವನದ ಅರ್ಚನೆಗೆ ಒಂದೆರಡು ದೀಪಗಳು ಸಾಲವೇ, ಇಡೀ ಮಂಚಾಲೆ ಗ್ರಾಮ ಬೇಕೇ ಎಂದು ಕೇಳುವರು. ಆಗ ಶಿರಸ್ತೇದಾರರು ಮಂತ್ರಾಲಯದ ಪ್ರಭುಗಳ ಮಹಿಮೆಯಿಂದ ಪರಿವರ್ತಿತನಾಗಿ ಆದೋನಿಯ ನವಾಬನು ಸ್ವಾಮಿಗಳಿಗೆ ನೀಡಿದ ಕಾಣಿಕೆ. ಮೇಲಾಗಿ ಈ ಸ್ಥಿರಾಸ್ತಿಯ ಉತ್ಪನ್ನಗಳಿಂದ, ಮಠದ ನಿತ್ಯಕೈಂಕರ್ಯ ಧಾರ್ಮಿಕ ವಿಧಿಗಳು ನಿರಂತರ ನಡೆಯುತ್ತಿವೆ ಎನ್ನುವರು. ಅಲ್ಲದೆ ರಾಯರ ಮಹಿಮೆಗಳನ್ನು ಹಲವಾರು ರಾಯರ ಭಕ್ತರ ಮೂಲಕ ಮನ್ರೋಗೆ ತಿಳಿಸುವರು.

ಇದನ್ನು ಕೇಳಿದ ಜಿಲ್ಲಾಧಿಕಾರಿ, ಮನ್ರೋ ತಾನೇ ಸ್ವತಃ ಸ್ಥಳ ಪರಿಶೀಲಿಸಬಯಸಿ, ಶಿರಸ್ತೇದಾರರಿಂದೊಡಗೂಡಿ, ಶ್ರೀಮಠಕ್ಕೆ ಮರುದಿನ ಬರುವರು. ಇದನ್ನು ನೋಡಲು ಮಂತ್ರಾಲಯದಲ್ಲಿ ದೊಡ್ಡ ಜನಜಂಗುಳಿಯೇ ಸೇರಿತ್ತು. ಬೂಟುಗಳನ್ನು ಹೊರತೆಗೆದಿಟ್ಟ ಮನ್ರೋ ಮಠದ ಒಳಾಂಗಣಕ್ಕೆ ಬಂದು ಮಂತ್ರಾಲಯ ಪ್ರಭುಗಳ ವೃಂದಾವನದ ಮುಂದೆ ನಿಂತು, ಹ್ಯಾಟನ್ನು ತೆಗೆದು ತನ್ನ ಕ್ರಮದಲ್ಲಿ ವೃಂದಾವನಕ್ಕೆ ವಂದಿಸಿ, ವೃಂದಾವನವನ್ನು ನೋಡ ತೊಡಗುವರು. ತಕ್ಷಣ ವೃಂದಾವನದಿಂದ ಸಶರೀರರಾಗಿ ಹೊರಬಂದ ಗುರುರಾಯರು, "ಈ ಸ್ಥಳ ಬಹು ಪುರಾತನ ಕಾಲದಿಂದ ನಮ್ಮ ವಶದಲ್ಲಿದೆ. ಇದು ಹೀಗೇ ಮುಂದುವರಿಯಲಿ" ಎಂದು ಮನ್ರೋಗೆ ಆಂಗ್ಲಭಾಷೆಯಲ್ಲಿ ಹೇಳುತ್ತಾರೆ. ಗುರುರಾಜರ ದರ್ಶನ ಭಾಗ್ಯದಿಂದ ಪುಳಕಿತರಾದ ಮನ್ರೋ ಪುನರಪಿ ಗುರುಗಳಿಗೆ ವಂದನೆಗಳನ್ನು ಸಲ್ಲಿಸುತ್ತಾ ಅರ್ಚಕರು ನೀಡಿದ ಫಲ ಮಂತ್ರಾಕ್ಷತೆಗಳನ್ನು ಸ್ವೀಕರಿಸಿ ಮಂಚಾಲೆ ಗ್ರಾಮವು ಮಠಕ್ಕೆ ಸೇರಿದ ಆಸ್ತಿ, ಆದ್ದರಿಂದ ಅದು ಅದೇ ರೀತಿ ಇರುವುದು ಸೂಕ್ತ. ಸರಕಾರೀ ಹಸ್ತಕ್ಷೇಪ ಅನಪೇಕ್ಷಣೀಯ ಎಂಬುದಾಗಿ ಶಿಫಾರಸು ಮಾಡಿ ಮಂಜೂರಿಗಾಗಿ ಮದ್ರಾಸಿನ ಗವರ್ನರರಿಗೆ ಕಳುಹಿಸುವರು.

ಆ ಬಳಿಕ ಕೆಲ ದಿನಗಳಲ್ಲಿ ಮದ್ರಾಸಿನ ಗವರ್ನರರು ದೀರ್ಘಕಾಲ ರಜೆಯಲ್ಲಿ ಹೋಗುವರು. ಬಳ್ಳಾರಿಯ ಜಿಲ್ಲಾಧಿಕಾರಿ, ಮನ್ರೋ ಮದ್ರಾಸಿನ ಗವರ್ನರ್ ಆಗಿ ಭಡ್ತಿಯೊಂದಿಗೆ ವರ್ಗಗೊಳ್ಳುತ್ತಾರೆ.

ಮನ್ರೋ ಮದ್ರಾಸಿಗೆ ಬಂದು, ಅಧಿಕಾರಿ ಸ್ವೀಕರಿಸುವಾಗ, ಜಿಲ್ಲಾಧಿಕಾರಿಯಾಗಿ ತಾವೇ ಮಂಚಾಲೆ ಗ್ರಾಮದ ಕುರಿತು ಕಳುಹಿಸಿದ ವರದಿಯನ್ನು ಈಗ ಗವರ್ನರ್ ಆಗಿ ಮಂಜೂರು ಮಾಡಿ ಮಂಚಾಲೆ ಗ್ರಾಮವು ಶ್ರೀ ಮಠಕ್ಕೆ ಸೇರಿದ ಆಸ್ತಿ ಎಂಬುದಾಗಿ ಖಾಯಂ ಆದೇಶ ನೀಡುತ್ತಾರೆ. ರಾಘವೇಂದ್ರ ಗುರುಗಳ ಅಗಮ್ಯ ಮಹಿಮಾತಿಶಯಕ್ಕೆ ಬೇರೆ ನಿದರ್ಶನ ಬೇಕೆ? ಅಲ್ಲದೆ ಈ ವಿಷಯ ಕ್ರಿ.ಶ. ೧೮೧೫ ರಲ್ಲಿ ಸರ್ಕಾರದ ಗೆಜೆಟ್ಟಿನಲ್ಲಿ ಭಾಗ ೧೧ ಪುಟ ೨೧೩ ಮಂಚಾಲೆ (ಆದೋನಿ ತಾಲೂಕು) ದಲ್ಲಿ ಪ್ರಕಟವಾಗಿದೆ. ಮೂಲ ವರದಿ ಆಂಗ್ಲಭಾಷೆಯದ್ದು ಅದರ ಕನ್ನಡ ಪರಿಪಾಠ ಕೆಳಗೆ ನೀಡಲಾಗಿದೆ.

ಸುಮಾರು ೧,೨೧೨ ಜನಸಂಖ್ಯೆ ಹೊಂದಿರುವ ಆದೋನಿ ತಾಲೂಕಿನ ಬಹಳ ಉತ್ತರ ಭಾಗದಲ್ಲಿ ತುಂಗಾತಟದಲ್ಲಿ ಮಂಚಾಲೆ ಎಂಬ ಸಣ್ಣ ಹಳ್ಳಿಯಿದೆ. ಮಾಧ್ವಯತಿಗಳಾದ ರಾಘವೇಂದ್ರ ಸ್ವಾಮಿಗಳ ವೃಂದಾವನದ ನೆಲೆಯಿಂದ ಈ ಗ್ರಾಮ ಸುಪ್ರಸಿದ್ಧವಾಗಿದೆ. ಸ್ವಾಮಿಗಳ ಆರಾಧನೆ ಪ್ರತಿ ವರ್ಷ ಅಗೋಸ್ತ್ ತಿಂಗಳಲ್ಲಿ ನಡೆಯುತ್ತಿದ್ದು ಅದಕ್ಕಾಗಿ ದೇಶದ ಎಲ್ಲಾ ಪ್ರಾಂತ್ಯಗಳಿಂದ ಯಾತ್ರಿಗಳು ಮಂತ್ರಾಲಯಕ್ಕೆ ಬರುತ್ತಾರೆ. ಈ ವೃಂದಾವನದಲ್ಲಿ ಶಿಲ್ಪಕಲೆಯ ವೈಶಿಷ್ಟ್ಯವೇನೂ ಕಂಡು ಬರುವುದಿಲ್ಲ. ೧೬೬೨ರಿಂದ ೧೬೮೨ರ ವರೆಗೆ ಆದೋನಿಯ ನವಾಬನಾದ ಅಸದುಲ್ಲಾಖಾನನ ದಿವಾನನಾದ ವೆಂಕಣ್ಣನು ಮಂಚಾಲೆ ಗ್ರಾಮವನ್ನು ಶ್ರೀ ಮಠಕ್ಕೆ ಉಂಬಳಿಯಾಗಿ ನೀಡಿದ್ದನು.

ಈ ಉಂಬಳಿ ಭೂಮಿಯನ್ನು ಸರ್ಕಾರ ವಶೀಕರಣಗೊಳಿಸಲು ಅದ್ವಾದೇಶ ನೀಡಿದಾಗ ಸ್ಥಳೀಯ ಜನರು ಸ್ಥಳ ಮಹಾತ್ಮೆಯನ್ನು ಜಿಲ್ಲಾಧಿಕಾರಿ ಮನ್ರೋವಿಗೆ ನಿವೇದಿಸುತ್ತಾರೆ. ಆದಳಿತ ಸ್ಥಳ ವೀಕ್ಷಣೆಗಾಗಿ ಸ್ವಯಂ ಮನ್ರೋ ಮಂತ್ರಾಲಯಕ್ಕೆ ಬಂದು ಪಾದರಕ್ಷೆಗಳನ್ನು ಕಳಚಿ ರಾಯರ ಮುಂದೆ ನಿಲ್ಲುವರು. ಆಗ ರಾಯರು ವೃಂದಾವನದಿಂದ ಹೊರಬಂದು ಮನ್ರೋವಿಗೆ ದರ್ಶನ ನೀಡಿ ಈ ವಿಚಾರದಲ್ಲಿ ಮನ್ರೋವಿನೊಂದಿಗೆ ಸಂಭಾಷಿಸುತ್ತಾರೆ. ಈ ದರ್ಶನ ಮತ್ತು ಮಾತು, ಮನ್ರೋವಿನ ವಿನಾಃ ಅಲ್ಲಿನೆರೆದ ಬೇರಾರೂ ಕಂಡಿಲ್ಲ, ಕೇಳಿಲ್ಲ. ಈ ಸಂಭಾಷಣೆ ಬಳಿಕ ತನ್ನ ಊರಿಗೆ ಹಿಂದಿರುಗಿದ ಮನ್ರೋ ಸರ್ಕಾರಿ ಆಜ್ಞೆಯನ್ನು ರದ್ದು ಮಾಡಿ ಸದ್ರಿ ಆಸ್ತಿ ಮಠದ ವಶ ಮುಂದುವರಿಯಲು ಗವರ್ನರರಿಗೆ ಶಿಫಾರಸು ಮಾಡುತ್ತಾರೆ.

ಈ ರೀತಿ ಮಂತ್ರಾಲಯ ಪ್ರಭುಗಳು ವೃಂದಾವನ ಪ್ರವೇಶಗೈದ ನಂತರವೂ ಅನೇಕರಿಗೆ ಅವರವರ ಯೋಗ್ಯತೆಗೆ ಅನುಗುಣವಾಗಿ ಪ್ರತ್ಯಕ್ಷ ದರ್ಶನ, ಸ್ವಪ್ನ

(24 ನೇ ಪುಟ ನೋಡಿ)

# ಸ್ತೋತ್ರ ರತ್ನ

---ಡಾ|| ವಿ. ಎಸ್. ಸಂಪತ್ಕುಮಾರಾಚಾರ್ಯ.

(ಮುಂದುವರಿದುದು)

ಶ್ಲೋಕ : 13

ವೇದಾಪಹಾರ ಗುರುಪಾತಕ
ದೈತ್ಯಪೀಡಾ ಆದಿ
ಆಪತ್ ವಿಮೋಚನ
ಮಹಿಷ್ಠಫಲ ಪ್ರದಾನ್ಯೈಃ
ಕೋನ್ಯಃ ಪ್ರಜಾ ಪಶುಪತೀ
ಪರಿಪಾತಿ ? ಕಸ್ಯ
ಪಾದೋದಕೇನ ಸ
ಶಿವಃ ಸ್ವಶಿರೋ ಧೃತೇನ ?

ಭಾವಾರ್ಥ:-- ಮಧುಕೈಟಭಾದಿಗಳಿಂದ ವೇದಾಪಹಾರ, ತನ್ನ ಗುರುವಾದ ತಂದೆಯಾದ ಬ್ರಹ್ಮನ ಐನೆಯ ತಲೆಯನ್ನು ಕಡಿದುದರಿಂದ ಸಂಭವಿಸಿದ ಮಹಾಪಾತಕ, ಅಂಧಕಾದಿ ರಾಕ್ಷಸರ ಪೀಡೆ, ಇವೇ ಮುಂತಾದ ಆಪತ್ತುಗಳಿಂದ ಬಿಡಿಸಿ, ಶ್ರೇಷ್ಠವಾದ ಫಲಗಳನ್ನು ಕೊಟ್ಟು ಬ್ರಹ್ಮನನ್ನು ಶಿವನನ್ನೂ ಸಲಹುವವನು ನೀನಲ್ಲದೆ ಬೇರೆಯಾರು? ನಿನ್ನ ಪಾದೋದಕವನ್ನಲ್ಲದೆ ಬೇರೆ ಯಾರದನ್ನು ತನ್ನ ಶಿರಸ್ಸಿನಲ್ಲಿ ಧರಿಸಿ ಆ ಶಿವನು ಮಂಗಳಕರನಾಗಿದ್ದಾನೆ?

ವಿಶೇಷಾರ್ಥ:-- ಈ ಶ್ಲೋಕದಲ್ಲಿ ಈಶ್ವರ ಶಬ್ದದ ಅರ್ಥವ್ಯಕ್ತವಾಗುತ್ತದೆ. ಪರಬ್ರಹ್ಮನನ್ನು ಬಿಟ್ಟರೆ ಉಳಿದವರೆಲ್ಲರೂ ಅನೀಶ್ವರರು. ಅಂದರೆ ಪರರಿಂದ ತೊಂದರೆಗೆ ಒಳಗಾಗುವ ವ್ಯಕ್ತಿಗಳು. ಪರರಿಗೆ ಕ್ಲೇಶ ಉಂಟಾದರೆ ಅದನ್ನು ನಿವಾರಿಸುವ ಶಕ್ತಿ ಇವರಿಗಿರುವುದಿಲ್ಲ. ತತ್ಕಾರಣ 'ಕಃ ಶ್ರೀ ಶ್ರಿಯಃ' ಎಂದು ಹಿಂದೆ ಹೇಳಿರುವಂತೆ, ಪರಿಪೂರ್ಣವಾಗಿ ಸಮೃದ್ಧಿ ಇರುವುದರಿಂದ, ತತ್ಫಲವಾಗಿ ಸರ್ವೈಶ್ವರತ್ವವು ಉಳಿದುಕೊಂಡಿರುವುದರಿಂದ, ಸಮೃದ್ಧನಾದ ಸ್ವತಂತ್ರನು ಈಶ್ವರ. ಸಮೃದ್ಧಿ ಎಂದರೆ ವಿಭೂತಿ. ಚೇತನಾಚೇತನ ಸಮೂಹವು ತನ್ನ ಅಧೀನದಲ್ಲಿ ಉಳಿದುಕೊಳ್ಳುವುದು. ಅವುಗಳ ಸಂರಕ್ಷಣೆ, ಉತ್ಪತ್ತಿ ಮೊದಲಾದುವುಗಳನ್ನು ತನ್ನ ಹೊಣೆಯಾಗಿ, ಅದರಂತೆ ಅವುಗಳನ್ನು ಸನ್ನಿವೇಶೋಚಿತವಾಗಿ ರಕ್ಷಿಸುವ ದೀಕ್ಷೆ ಅವನ ಪಾಲಿಗೆ ಸೇರಿದ್ದು. ಇದನ್ನು ಶ್ರೀ ಭಾಷ್ಯದಲ್ಲಿ 'ರಕ್ಷೈಕದೀಕ್ಷೇ' ಎಂಬ ವರ್ಣನೆಯಲ್ಲಿ ಪ್ರಕಟಪಡಿಸಲಾಗಿದೆ. ಉತ್ಪತ್ತಿಗಿಂತ ಉತ್ಪನ್ನ ವಸ್ತುವಿನ ರಕ್ಷಣೆಯು ಮುಖ್ಯ. ನಿರರ್ಗಳವಾಗಿ ರಕ್ಷಣೆ ಏರ್ಪಡಬೇಕಾದರೆ ಉತ್ಪಾದಕತ್ವವು ರಕ್ಷಕನ ಸ್ವಭಾವವಾಗಿರುವುದು ಅಗತ್ಯ. ಸರ್ವವಿಧವಾದ ಹೊಣೆಯು ಈಶ್ವರನ ಪಾಲಿಗೆ ಮಾತ್ರ ಉಳಿಯುತ್ತದೆ ಎಂದು ಅವನ ಅತಿಶಯವು ವ್ಯಕ್ತವಾಗುತ್ತದೆ. ಬ್ರಹ್ಮ ರುದ್ರ, ಇಂದ್ರ ಮುಂತಾದವರಿಗೆ ಆಪತ್ತು ಒದಗಿದರೆ ಅದನ್ನು ತಡೆಗಟ್ಟಲಾರದೆ ಅಥವಾ ಸಹಿಸಲಾರದೆ ಇರುವ ವೇಳೆಯಲ್ಲಿ ಅವರಿಗೆ ಸಹಾಯ ನೀಡಿದವನು ಯಾವನೋ ಅವನೇ ಸರ್ವೇಶ್ವರ. ಏಕಮೇವ ಪರಬ್ರಹ್ಮ ಅವನು 'ಸರ್ವದಾ ಸರ್ವತ್ರ ಸರ್ವಥಾ ಚ' ಎಂಬಂತೆ ಈಶ್ವರ ಶಬ್ದದ ಸಾರ್ಥಕ್ಯವು ವ್ಯಕ್ತವಾಗುತ್ತದೆ. ಉದಾ : ಕೇವಲ ಪದಾರ್ಥ ಸೃಷ್ಟಿ ಮಾಡಬಲ್ಲವನು ಅಂದರೆ ಅಚಿದಂಶಕ್ಕೆ ಸೂಕ್ತವಾದ ರೂಪರೇಖೆಗಳನ್ನು ಒದಗಿಸುವವನು ಚತುರ್ಮುಖ ಬ್ರಹ್ಮ ಈಶ್ವರನು ಜ್ಞಾನವನ್ನು ಯಾವಾಗಲೂ ಉಳಿಸಿಕೊಂಡಿರುವ ಸರ್ವಶ್ರೇಷ್ಠನು. ಜ್ಞಾನಾಗ್ನಿಯಿಂದ ಸಕಲವನ್ನೂ ಕಾಮನನ್ನು ಸುಟ್ಟಂತೆ ಸುಡಬಲ್ಲ ಶಕ್ತಿಯುಳ್ಳವನು. ಆದರೆ ದೋಷವನ್ನು ನಿರ್ಮೂಲಮಾಡಬಲ್ಲ ವ್ಯಕ್ತಿ. ಪರಬ್ರಹ್ಮ ಒಂದೇ. ವಸ್ತು ಸರ್ವಸ್ವತಂತ್ರವಾಗಿದ್ದು ದುಃಖ ನಿವಾರಣೆ ಮಾಡಬಲ್ಲುದು. ಪುರಾಣಗಳಲ್ಲಿ ಹೇಳಿರುವಂತೆ, ಬ್ರಹ್ಮನು ವೇದಧನವನ್ನು ಕಳೆದುಕೊಂಡುದು. ಈಶ್ವರನು ಬ್ರಹ್ಮನ ಐದನೆಯ ತಲೆಯನ್ನು ಕಡಿದು ಕಾಪಾಲಿಯಾದುದು, ಇಂದ್ರನು ಅಸುರ ಕಾಟದಿಂದ ಭೋಗವನ್ನು ಅನುಭವಿಸಲಾರದೆ ಒದ್ದಾಡುತ್ತಿದ್ದುದು, ಇವರೆಲ್ಲರ ವಿಪತ್ತನ್ನು ನಾರಾಯಣನು ಹೋಗಲಾಡಿಸಿ ನೆಮ್ಮದಿ ನೀಡಿದನು ಎಂದು ನಾರಾಯಣನ ಸರ್ವೇಶ್ವರ ತತ್ವವನ್ನು ಈ ಶ್ಲೋಕದಲ್ಲಿ ಆಚಾರ್ಯರು ಸ್ಥಿರಪಡಿಸಿದ್ದಾರೆ. ಆಪತ್ತನ್ನು ಹೋಗಲಾಡಿಸುವುದರಿಂದ ಸರ್ವೇಶ್ವರನಿಗೆ ಮನ್ನಣೆ ದೊರೆಯಿತು. ಅಂದರೆ ರಕ್ಷ



ಸಂದರ್ಶಿಸಿ ಆನಂದಿಸಿ

# ಪ್ರಾಕ್ತನ ವಸ್ತು ಸಂಗ್ರಹಾಲಯ

ಸನಾತನ ಧರ್ಮದ ಮೌಲ್ಯ, ಹಿರಿಮೆ, ಪರಂಪರೆ, ಸಂಸ್ಕೃತಿಗಳ ಪ್ರಸಾರದಲ್ಲಿ ತಿರುಮಲೆ ತಿರುಪತಿ ದೇವಸ್ಥಾನಗಳು ಹಲವು ರೀತಿಯಲ್ಲಿ ಕೆಲಸಮಾಡುತ್ತಿದ್ದು, ಈ ಉದ್ದೇಶ ಸಾಧನೆಗಾಗಿ ತಿರುಮಲೆ ಹಾಗೂ ತಿರುಪತಿಗಳಲ್ಲಿ ಪುರಾವಸ್ತು ಪ್ರದರ್ಶನಶಾಲೆಗಳನ್ನು ಏರ್ಪಡಿಸಲಾಗಿದೆ.

ತಿರುಮಲೆಯ ಸಾವಿರ ಕಂಬದ ಸಂಭಾಂಗಣದಲ್ಲಿ ತಿರುಪತಿ ತಿರುಮಲೆಗಳ ಪರಿಸರದಲ್ಲಿ ದೊರೆತ ಎಲ್ಲ ಪುರಾವಸ್ತುಗಳನ್ನು, ಮಾನವ ಶಾಸ್ತ್ರ, ಪ್ರಾಕ್ ವಸ್ತುಗಳನ್ನೂ ನೆಲ, ಸಸ್ಯಗಳ ಬಗೆಗಳನ್ನೂ, ವಾಸ್ತು ವಿಗ್ರಹ ಶಿಲ್ಪಗಳನ್ನೂ ದೇವಾಲಯಗಳ ಆಚಾರ ವಿಚಾರಗಳನ್ನೂ ಸಂಗ್ರಹಿಸಲಾಗಿದೆ. ಇಲ್ಲಿ ಅಪರೂಪದ ಮರದ ಕೆತ್ತನೆಗಳೂ, ಶಿಲ್ಪಗಳೂ, ಲೋಹ ವಿಗ್ರಹಗಳೂ, ಸಂಗೀತದ ವಿವಿಧ ಪ್ರಾಚೀನ ವಾದ್ಯ ವಿಶೇಷಗಳೂ, ತಿ.ತಿ.ದೇ. ಮತ್ತಿತರ ಕಡೆಗಳಲ್ಲಿ ದೊರೆತ ಆಯುಧಗಳೂ ಪ್ರದರ್ಶಿತವಾಗಿವೆ. ದೇರೆ ದೇರೆ ಜಮೀಂದಾರರಿಂದ ದಿವಂಗತ ವೇಟೂರಿ ಪ್ರಭಾಕರಶಾಸ್ತ್ರಿಯವರು ಸಂಗ್ರಹಿಸಿದ ವಸ್ತುಗಳೂ ಇಲ್ಲಿವೆ. ೧೯೮೦ ಡಿಸೆಂಬರ್ ೨೭ ರಂದು ಅಂದಿನ ರಾಷ್ಟ್ರಾಧ್ಯಕ್ಷರಾಗಿದ್ದ ಶ್ರೀ ಎನ್. ಸಂಜೀವರೆಡ್ಡಿಯವರು ಈ ವಸ್ತು ಪ್ರದರ್ಶನ ಶಾಲೆಯನ್ನು ಉದ್ಘಾಟಿಸಿದರು.

ತಿರುಪತಿಯ ಶ್ರೀ ಗೋವಿಂದರಾಜಸ್ವಾಮಿ ದೇವಾಲಯದ ಬಳಿಯ ಕಚೇರಿನಮ್ಮಾಳ್ವಾರ್ ದೇವಾಲಯದ ಪೆರಿಯಾಳ್ವಾರ್ ಮಂಟಪದಲ್ಲಿ, ವೈಷ್ಣವ ದೇವಾಲಯ ಕಲೆಗೆಂದು ಮೀಸಲಾದ ಶ್ರೀ ವೆಂಕಟೇಶ್ವರ ವಾಸ್ತುಕಲಾವಸ್ತು ಸಂಗ್ರಹಾಲಯವನ್ನು ಏರ್ಪಡಿಸಲಾಗಿದೆ. ಈ ಸಂಗ್ರಹಾಲಯದಲ್ಲಿ ವೈಷ್ಣವತೆಯ ವೈಶಿಷ್ಟ್ಯವನ್ನು ವಿವರಿಸಲು ಪ್ರಯತ್ನಿಸಲಾಗಿದೆ. ಇದರ ಹಲವು ವಿಭಾಗಗಳೆಂದರೆ---

ವಾಸ್ತುಶಾಸ್ತ್ರ : ಈ ವಿಭಾಗದಲ್ಲಿ ದೇವಾಲಯ ನಿರ್ಮಾಣದಲ್ಲಿನ ಯೋಜನಾವಿವರಗಳನ್ನು ನೀಡಲಾಗಿದೆ. ಆಗಮ ಹಾಗೂ ಶಿಲ್ಪಶಾಸ್ತ್ರಗಳು ದೇವಾಲಯದ ನಿರ್ಮಾಣದ ಸ್ಥಳ ನಿರ್ಧಾರ, ಭೂಶುದ್ಧಿ, ವಿಗ್ರಹಗಳ ದಿಕ್ಕು ಹಾಗೂ ಭೂಮಿಯ ನಿರ್ದೇಶನಗಳನ್ನು ನೀಡಿದ್ದು, ಸೂಕ್ತ ವಿವರ ಪಟ್ಟಿಗಳು ಹಾಗೂ ಮಾದರಿಗಳಿಂದ ಈ ವಿವರಗಳನ್ನು ಸ್ಪಷ್ಟಪಡಿಸಲಾಗಿದೆ.

ಶಿಲ್ಪಶಾಸ್ತ್ರ : ಈ ವಿಭಾಗದಲ್ಲಿ ವಿಗ್ರಹಗಳ ಉದ್ದಳತೆಗಳು ಸಾಪೇಕ್ಷವಾದುದೆಂಬುದನ್ನು ವಿವರಿಸಿ ಅವು ಸ್ಥಳೀಯ ಹಾಗೂ ಯಾಜಮಾನ್ಯವನ್ನು ಅನುಸರಿಸುವುದೆಂದು ವಿವರಿಸಲಾಗಿದೆ.

ವಿಗ್ರಹಗಳು : ವಿಷ್ಣುವಿನ ಹಲವಾರು ರೂಪಗಳ, ಭಂಗಿಗಳೂ, ಆಭರಣಗಳೂ ವ್ಯಾವೃತವಾಗಿವೆ.

ಆಳ್ವಾರ್‌ಗಳು : ವಿಶಿಷ್ಟಾದ್ವೈತ ತತ್ತ್ವದ ಪ್ರಪತ್ತಿ ಮಾರ್ಗಕ್ಕೆ ಆಳ್ವರರ ಸಂದೇಶಗಳೇ ಆಧಾರ. ಶ್ರೀ ರಾಮಾನುಜಾಚಾರ್ಯರು ಆಳ್ವಾರರನ್ನು ಆರಾಧಿಸುತ್ತಿದ್ದರು.

ಸಮಯಾಚಾರಗಳು : ಸನಾತನದ ಧರ್ಮದಲ್ಲಿ ಹುಟ್ಟಿನಿಂದ ಸಾವಿನವರೆಗೆ ಹದಿನಾರು ಸಂಸ್ಕಾರಗಳಿಗೆ ಪ್ರಾಮುಖ್ಯವಿದೆ. ವಿಷ್ಣುದೇವಾಲಯದಲ್ಲಿ ಬಳಸಲಾಗುವ ಎಲ್ಲ ಪರಿಕರಗಳ ವಿವರಗಳೂ, ಹೋಮ ಕುಂಡ ಹಾಗೂ ವಾಹನಗಳ ಮಾದರಿಗಳೂ ಇವೆ. ೧೦೮ ದಿವ್ಯಕ್ಷೇತ್ರಗಳೂ ೧೦೮ ತಿರುಪತಿಗಳೆಂದೇ ಪ್ರಸಿದ್ಧವಾಗಿರುವ ವೈಷ್ಣವ ಕ್ಷೇತ್ರಗಳ ಚಿತ್ರಗಳ ಮೂಲಕ ಈ ದೇವಾಲಯಗಳ ವಾಸ್ತುಶಿಲ್ಪದ ಪರಿಚಯವನ್ನು ನೀಡಲಾಗಿದೆ.

ಕಲೆ : ಹರಿದಾಸರ ಹಿರಿಮೆಯನ್ನೂ; ಭರತನಾಟ್ಯಾದಿ ಕಲೆಗಳನ್ನೂ ವಿವರಿಸಲಾಗಿದೆ. ವಿಷ್ಣು, ಶಕ್ತಿ, ಷಣ್ಮುಖ, ಮೊದಲಾದ ೮ನೇ ಶತಕದ ವಿಗ್ರಹಗಳಿಂದ ಆರಂಭವಾದ ಸಂಗ್ರಹ ಆಕರ್ಷಕವಾಗಿದೆ. ೩ನೇ ರಾಜರಾಜನ ಕುಂತ್ರಪಾಕಂ ದೇವಾಲಯದಿಂದ ಸಂಗ್ರಹಿತವಾದ ಚಾರಿತ್ರಿಕ ವಿವರಗಳಿವೆ.

**ಪರಂಪರೆಯ ಪರಿಚಯ ಹೊಂದಿರಿ --- ಒಮ್ಮೆ ಭೇಟಿ ನೀಡಿರಿ.**

---

**ಕಾಲ : ಬೆಳಗ್ಗೆ ೮ ರಿಂದ**
**ರಾತ್ರಿ ೮ ರ ವರೆಗೆ**

**ಟಿಕೆಟ್ ರೂ. ೧--೦೦ (ಹಿರಿಯರಿಗೆ)**
**„ „ ೦--೫೦ (ಕಿರಿಯರಿಗೆ)**

ಣೆಯು ಪರಬ್ರಹ್ಮನ ಸ್ವಭಾವ; ಮತ್ತಾರಿಗೂ ಅದು ಸಲ್ಲದು ಎಂಬುದನ್ನು ದೃಢೀಕರಿಸಿದ್ದಾರೆ.

ಶ್ಲೋಕ : 14

ಕಸ್ಯ ಉದರೇ ಹರ
ವಿರಿಂಚ ಮುಖಃ ಪ್ರಪಂಚಃ
ಕೋ ರಕ್ಷತಿ ಇಮಂ?
ಅಜನಿಷ್ಟ ಚ ಕಸ್ಯನಾಭೇಃ?
ಕ್ರಾಂತ್ವಾ ನಿಗೀರ್ಯ ಪುನಃ
ಉದ್ಗಿರ ತಿತ್ವ ದನ್ಯಃ
ಕಃ? ಕೇನವಾ ಏಷ
ಪರವಾನ್ ಇತಿ ಶಕ್ಯಶಂಕಃ?

ಭಾವಾರ್ಥ :-- ಈಶ್ವರ, ಬ್ರಹ್ಮ ಮೊದಲಾದವರನ್ನೊಳಗೊಂಡ ಈ ಪ್ರಪಂಚವು ನಿನ್ನನ್ನು ಬಿಟ್ಟರೆ ಬೇರೆ ಯಾರ ಹೊಟ್ಟೆಯೊಳಗೆ ಸೂಕ್ಷ್ಮರೂಪವಾಗಿ ಇದೆ? ಈ ಪ್ರಪಂಚವನ್ನು ಕಾಪಾಡುವವನೂ ನೀನಲ್ಲದೆ ಬೇರೆ ಯಾರು? ಈ ಬ್ರಹ್ಮನು ನಿನ್ನನ್ನು ಬಿಟ್ಟು ಬೇರೆ ಯಾರ ಹೊಕ್ಕಳಿನಿಂದ ಹುಟ್ಟಿದನು? ನಿನ್ನನ್ನು ಬಿಟ್ಟು ಬೇರೆ ಯಾವನು ಈ ಪ್ರಪಂಚವನ್ನು ಆಕ್ರಮಿಸಿ, ಪ್ರಳಯಕಾಲದಲ್ಲಿ ನುಂಗಿ, ಪುನಃ ಹೊರಗೆ ಬಿಡುವನು? ನಿನ್ನನ್ನು ಬಿಟ್ಟರೆ ಬೇರೆ ಯಾರ ವಿಷಯದಲ್ಲಿ ತಾನೇ, "ಈ ಲೋಕಕ್ಕೆ ಸ್ವಾಮಿಯು ಇವನೇ ಇರಬಹುದು" ಎಂಬ ಸಂದೇಹ ಉಂಟಾಗಲು ಸಾಧ್ಯ?

ವಿಶೇಷಾರ್ಥ:-- ಪರಬ್ರಹ್ಮನ ಸ್ವಭಾವವು ರಕ್ಷಕತ್ವ. ಇದು ಮತ್ತಾರಿಗೂ ಸಲ್ಲದು ಎಂಬ ವಿಷಯದಲ್ಲಿ ಜನಸಾಮಾನ್ಯರಿಗೆ ಒಂದು ಭಾವನೆ ತೋರುತ್ತದೆ. ಆಪತ್ತು ಒದಗಿದರೆ ಈಶ್ವರಾಪೇಕ್ಷೆ, ಇಲ್ಲವಾದರೆ ನಿರೀಶ್ವರ ತತ್ವಸಂಭವ. ಈ ವಿಧವಾದ ಸಂಕುಚಿತ ಭಾವನೆಯನ್ನು ಹೊರದೂಡಿ ಸರ್ವಾವಸ್ಥೆಗಳಲ್ಲೂ ಅವನ ಕೈವಾಡವಿದೆ. ಇದ್ದೇ ತೀರಬೇಕು ಎಂಬ ತತ್ವವನ್ನು ಬಹಿರಂಗಪಡಿಸಲು ಈ ಶ್ಲೋಕದ ಅವತರಣ.

ಚೇತನವಾಗಲೀ ಅಚೇತನವಾಗಲೀ, ಪ್ರತಿಯೊಂದು ಪದಾರ್ಥಕ್ಕೂ ಈಶ್ವರನು ಸರ್ವಾವಸ್ಥೆಯಲ್ಲೂ ಇರಬೇಕು. ಒಂದು ಕ್ಷಣ ಈ ಸಂಬಂಧವು ಕಾಣಿಸಿಕೊಳ್ಳದಿದ್ದರೆ ಅಧೀನ ಪದಾರ್ಥಗಳ ಸ್ವಾತಂತ್ರ್ಯ ಭಾವನೆಗೆ ಅವಕಾಶ ಏರ್ಪಡಬಹುದು. ಅಂದರೆ ಸರ್ವವಿಧದಲ್ಲೂ ಈಶ್ವರಾವಲಂಬನ ಅಗತ್ಯವಿಲ್ಲ. ಆಪತ್ತಿನಲ್ಲಿ ಮಾತ್ರ ಈಶ್ವರಾಪೇಕ್ಷೆ ಎಂಬ ಲೌಕಿಕ ಭಾವನೆ ತೋರಬಹುದು. ಯಾಮುನಾಚಾರ್ಯರು ಈ ಶ್ಲೋಕದಲ್ಲಿ ಈಶ್ವರನು ಉತ್ಪತ್ತಿಯೂ ಸಹ ಒಳಗೊಂಡ ಕಾರಣಭೂತನು ಎಂಬ ವೇದಾರ್ಥದ ವೈದಿಕ ತತ್ವವನ್ನು ಸ್ಪಷ್ಟಪಡಿಸಿದ್ದಾರೆ.

ಯಾವ ವಸ್ತುವಿನ ಜಠರದಲ್ಲಿ ರೂಪನಿರ್ಮಾಣ ನಿಪುಣನಾದ ಚತುರ್ಮುಖ ಬ್ರಹ್ಮನು, ಅಂತೆಯೇ ಜ್ಞಾನದಲ್ಲಿ ಶಿಖರ ಮಟ್ಟದಲ್ಲಿ ಕಾಣಿಸಿಕೊಳ್ಳುವ ಸರ್ವತ್ರ ಕೊಂಡಾಟಕ್ಕೆ ಹೆಸರುವಾಸಿಯಾದ ಮುಕ್ಕಣ್ಣನು, ಭೋಗದಲ್ಲೇ ಕಾಲಕಳೆಯುತ್ತಿರುವ ಇಂದ್ರನೂ, -- ಮತ್ತೆಲ್ಲರಿಗೂ, ಔದಾಸೀನ್ಯ ತಾಳದೆ ಸರ್ವಾಶ್ರಯಭೂತವಾಗಿ, ಸರ್ವರಕ್ಷಕವಾಗಿ ಸರ್ವವಿಧ ಸಂಬಂಧವನ್ನೂ ಇಟ್ಟುಕೊಂಡಿರುವ ಪರವಸ್ತುವನ್ನು ಬಿಟ್ಟರೆ ಮತ್ತಾವುದಿರಬಹುದು, ಎಂಬುದಾಗಿ ಅನ್ಯನಿಷೇಧಪೂರ್ವಕವಾಗಿ ಸುಪ್ರತಿಷ್ಠಿತ ತತ್ವವನ್ನು ಈ ಶ್ಲೋಕದಲ್ಲಿ ವಿವರಿಸಲಾಗಿದೆ.

ಮಹಾಚೇತನರಾಶಿಗಳು, ಅವರ ಬಳಕೆಗೆ ಅತ್ಯಪೇಕ್ಷಣವಾದ ಅಚೇತನ ದ್ರವ್ಯ -- ಎಲ್ಲವನ್ನೂ ಪ್ರಳಯಕಾಲದಲ್ಲಿ ತನ್ನ ಗರ್ಭದಲ್ಲಿ ಉಳಿಸಿಕೊಂಡಿರಬಲ್ಲ ಸವಾಶ್ರಯ ಭೂತ ಯಾವುದಿರಬಹುದು. ಅಂತೆಯೇ ಆ ಪದಾರ್ಥಗಳ ಬೆಳವಣಿಗೆ ಪರಬ್ರಹ್ಮನ ಬಸಿರಿನಲ್ಲೇ ಆಗುತ್ತದೆ. ಕೋ ರಕ್ಷತಿ? -- ಹೊರಗೆ ಬಿಟ್ಟುಕೊಡದೆ ತನ್ನೊಳಗೇ ಇಟ್ಟುಕೊಂಡು ರಕ್ಷಿಸುವ ತತ್ವ ಯಾವುದು; ಇದು ಪರಬ್ರಹ್ಮವಸ್ತುವಿನ ವಿನಾ ಮತ್ತಾರಿಗಾದರೂ ಸಲ್ಲಬಹುದೇ ಎಂಬ ಶಂಕೆಗೂ ಅವಕಾಶವಿಲ್ಲದೆ, ತತ್ಕಾರಣ, ಸರ್ವಥಾ, ಸರ್ವೇಷಾಂ, ಸರ್ವದಾ, ಸರ್ವತ್ರ ಎಂಬ ಯೋಗ ಚತುಷ್ಟಯವನ್ನು ಪಡೆದ ಮತ್ತೊಂದು ಇರ ಬಹುದೋ ಎಂಬ ಪ್ರಶ್ನೆಯ ರೂಪದಲ್ಲಿ ಕೇಳಿ, ವೇದದಲ್ಲಿ ತೋರಿಬರುವ ವೈದಿಕ ತತ್ವವನ್ನು ಸ್ಥಾಪಿಸಿರುತ್ತಾರೆ.

ಪರಬ್ರಹ್ಮನು ಸರ್ವವಿಧಾಯಕ. ಆದ್ದರಿಂದ ತತ್ವ ಒಬ್ಬನೇ ನಾಯಕನಾದ್ದರಿಂದ ಅದ್ವೈತ. ಸರ್ವನಿರ್ವಾಹಕನಾದ್ದರಿಂದ ವಿಶೇಷಣ ವಿಶಿಷ್ಟ. ಅಂದರೆ ವಿಶೇಷಣಕ್ಕೆ ಎಂದೆಂದಿಗೂ ಪಾರತಂತ್ರ್ಯವೇ ಸರ್ವವಿಧದಲ್ಲೂ ಸ್ವರೂಪ. ಇದೇ ಭಗವಂತನ ಸಾರ್ವಭೌಮತ್ವವನ್ನು ತೋರಿಸಬಲ್ಲ ದೃಷ್ಟಿ ಶ್ರೀಮದ್ವೇದ ಎಂಬುದನ್ನು ಬಹಿರಂಗಪಡಿಸುತ್ತಾರೆ. ಪ್ರಣವದಲ್ಲಿ ಪ್ರಥಮಾಕ್ಷರವಾದ ಅಕಾರವು ಪರಬ್ರಹ್ಮನಾದ ನಾರಾಯಣನನ್ನು ಸೂಚಿಸುತ್ತದೆ. ಅಕಾರಕ್ಕೆ ಜನಕವಾದ ವಸ್ತುವಿಲ್ಲ. ಇದರಲ್ಲಿ ರಕ್ಷಣೆಯೆಂಬ ವೃತ್ತಿ, ಪೂರ್ಣವಾಗಿ ತೋರುವುದರಿಂದ ಇದಕ್ಕೆ ಅನ್ಯಸಹಾಯ ಅಸಂಭವ. ಶಾಸ್ತ್ರದಲ್ಲಿ ಹೇಳುವಂತೆ ನಿಮಿತ್ತ ಕಾರಣತ್ವ, ಉಪಾದಾನ ಕಾರಣತ್ವ -- ಎರಡೂ ಅಸಂಕುಚಿತವಾಗಿ ಯಾವ ವಸ್ತುವಿನಲ್ಲಿ ತೋರುತ್ತವೆಯೋ ಅವನೇ ಶ್ರೀನಿವಾಸ. ಅವನೊಂದಿಗೆ ಸಂಬಂಧವು ನಿತ್ಯವಾದುದು. ಇದನ್ನರಿಯದಿರುವುದರಿಂದ ಸಂಸಾರಿಗಳು ವಿವಿಧ ರೂಪದಲ್ಲಿ ದುಃಖಕ್ಕೆ ಈಡಾಗುತ್ತಾರೆ. ಪ್ರಥಮಾಚಾರ್ಯನಾದ ಸರ್ವೇಶ್ವರನು ಸಂಬಂಧಜ್ಞಾನದ ನಿಮಿತ್ತ, ವಶ್ಯಪದಾರ್ಥಗಳಲ್ಲಿ ಸ್ವಾತಂತ್ರ್ಯಭಾವನೆ ಎಂಬ ಕೊಳಕನ್ನು ತಳ್ಳಿಹಾಕಿ, ತನ್ನ ಸರ್ವವಿಧವಾದ ವಶ್ಯತೆಯಲ್ಲಿ ಉಳಿಸಿಕೊಳ್ಳುತ್ತಾನೆ. ಆದಕಾರಣ ಕರ್ಮಕಾಂಡವಾದ ಪೂರ್ವಮೀಮಾಂಸೆಯಲ್ಲಿ ಅವನೇ ಅನುಷ್ಠಾನ ಅಂದರೆ ರಕ್ಷಕ. ಆ ರಕ್ಷಕತ್ವವು ಉತ್ತರಕಾಂಡದಲ್ಲಿ ಕಾಣಿಸಿಕೊಳ್ಳುವ ಪರಬ್ರಹ್ಮನೇ ಆಗಿರುತ್ತಾನೆ. ಅವನೇ ಅಕಾರವಾಚ್ಯ. ಚೇತನ ಅಚೇತನ ಸಮಸ್ತವೂ ವಿಧೇಯ ಮತ್ತು ವಶ್ಯ. ಈಶ್ವರನು ವಿಧಾಯಕ ಮತ್ತು ರಕ್ಷಕ. ಈ ರಹಸ್ಯವನ್ನು ಆಚಾರ್ಯರು ಈ ಶ್ಲೋಕದಲ್ಲಿ ಬಹಿರಂಗಪಡಿಸಿದ್ದಾರೆ.

ಶ್ಲೋಕ : 15

ತ್ವಾಂ ಶೀಲ ರೂಪ ಚರಿತ್ರೈಃ
ಪರಮ ಪ್ರಕೃಷ್ಟ
ಸತ್ವೇನ ಸಾತ್ವಿಕತಯಾ
ಪ್ರಬಲೈಶ್ಚ ಶಾಸ್ತ್ರೈಃ
ಪ್ರಖ್ಯಾತ ದೈವ
ಪರಮಾರ್ಥವಿದಾಂ ಮತೈಶ್ಚ
ನೈವ ಆಸುರ ಪ್ರಕೃತಯಃ
ಪ್ರಭವಂತಿ ಬೋದ್ಧುಂ

ಭಾವಾರ್ಥ :-- ನಿನ್ನ ಉದಾರಸ್ವಭಾವ, ಅಪ್ರಾಕೃತರೂಪ, ಮತ್ತು ಅದ್ಭುತ ಕಾರ್ಯಗಳನ್ನೆಸಗಿದ ಚರಿತ್ರೆ ಇವುಗಳಿಂದಾಗಲೀ, ಅತ್ಯುತ್ಕೃಷ್ಟವಾದ ಸತ್ವಗುಣದಿಂದಾಗಲೀ, ಸಾತ್ವಿಕಭಾವದ ರಾಮಾಯಣ, ವಿಷ್ಣುಪುರಾಣ ಮುಂತಾದ ಪ್ರಬಲಶಾಸ್ತ್ರಗಳಿಂದಾಗಲೀ, ಪ್ರಸಿದ್ಧರಾದ ದೇವತೆಗಳಲ್ಲಿ ಸರ್ವಶ್ರೇಷ್ಠನು ಯಾರೆಂಬುದನ್ನು ತಿಳಿದವರ ಅಭಿಪ್ರಾಯಗಳಿಂದಾಗಲೀ ತಾಮಸ ಪ್ರಕೃತಿಯುಳ್ಳವರು ನಿನ್ನನ್ನು ಸರಿಯಾಗಿ ಅರಿಯಲು ಶಕ್ತರಾಗುವುದಿಲ್ಲ.

ವಿಶೇಷಾರ್ಥ :-- ಈ ಶ್ಲೋಕದಲ್ಲಿ ಯಾಮುನಾಚಾರ್ಯರು ಪರತತ್ವದ ಪರಮೇಶ್ವರತ್ವವನ್ನು ಮನಗಾಣದವರ ವಿಚಾರವಾಗಿ ವಿಶ್ಲೇಷಿಸಿದ್ದಾರೆ. ಅಂಥವರಿಗೆ ಆತ್ಮಾಪಹಾರಿಗಳು ಎಂಬ ಹೆಸರು. ಅವರು ಸ್ವರೂಪತಃ ಅಸುರರಾಗುತ್ತಾರೆ. ಅಸುರ ಎಂದರೆ, ಅಸು--ಪ್ರಾಣವನ್ನು, ರ--ಹಿಂಡುವವರು. ಅಂದರೆ ಪರಮೇಶ್ವರನಲ್ಲಿ ಇರುವ ಅಹಮಾಕಾರವನ್ನು ತಮ್ಮಲ್ಲಿ ಬಳಸಿಕೊಳ್ಳುವವರು. ಇವರು ಅವನನ್ನು ವಶಪಡಿಸಿಕೊಳ್ಳುವ ಭಾವನೆಯಲ್ಲಿ ತೊಡಗಿ, ಅವನಲ್ಲಿರುವ ಈಶ್ವರತ್ವವನ್ನು ತಮ್ಮಲ್ಲಿ ಆರೋಪಿಸಿಕೊಳ್ಳುತ್ತಾರೆ. ಇದರಿಂದ ಸಂಭವಿಸುವ ಅನರ್ಥವೆಂದರೆ ಜೀವಾತ್ಮನ ಸ್ವರೂಪನಾಶ.

ಭಕ್ತರು ಅಹಂಕಾರದ ಪ್ರಭಾವದಿಂದ ದೈವೀಸ್ವಭಾವವನ್ನು ತ್ಯಜಿಸಿ ಆಸುರೀ ಪ್ರಭಾವಕ್ಕೆ ಒಳಪಟ್ಟು, ಕಂಟಕರಾಗಿ ಉಳಿದುಕೊಳ್ಳುತ್ತಾರೆ. ಇದರಿಂದ ಭಗವಂತನ ಮಹಿಮೆಗೆ ಕುಂದು ಏರ್ಪಟ್ಟು, ಕಲಹ ಕೋಲಾಹಲಗಳು ತಾಂಡವಾಡುತ್ತವೆ. ಅವರ ಆಸುರೀ ಭಾವ ತೊಲಗುವವರೆಗೆ ಲೋಕಕಂಟಕರಾಗಿಯೇ ಅವರು ಉಳಿದುಕೊಳ್ಳುತ್ತಾರೆ. ದೈವೀ ಸ್ವರೂಪದಲ್ಲಿ ಉಳಿದುಕೊಂಡಿರುವವರು ಇದನ್ನು ಸಹಿಸಲಾರರು. ಭಗವಂತನ ಸರ್ವೇಶ್ವರತ್ವಕ್ಕೆ ಧಕ್ಕೆ ತರುವ ಜನಗಳಿಂದ ಅವನ ಪಾರಮ್ಯಕ್ಕೆ ಎಂದೂ ಸಂಕೋಚ ಉಂಟಾಗಬಾರದು ಎಂಬ ತಮ್ಮ ದೃಷ್ಟಿಯಿಂದ, ಅವನಿಗೆ ಪಲ್ಲಾಂಡು ಎಂಬ ಪ್ರಬಂಧದಲ್ಲಿ ನುಡಿದಿರುವಂತೆ, ಸರ್ವೇಶ್ವರ ತತ್ವವನ್ನು ಅರಿತಿದ್ದರೂ, ಆಸುರೀ ವರ್ಗದ ಪ್ರಭಾವದಿಂದ ತಮಗೆ ತೊಂದರೆ ಉಂಟಾಗದಂತೆ, ಭಗವಂತನ ಮಹಿಮೆಗೆ ಧಕ್ಕೆ ಉಂಟಾಗಬಹುದೆಂದು ಶಂಕಿಸಿ ಅವನಿಗೆ ಮಂಗಳ ಕೋರುತ್ತಾರೆ.

ಇದರಲ್ಲಿ ತೋರುವುದು ಪ್ರಜೆಗಳಿಗೆ ಏರ್ಪಡುವ ತೊಂದರೆಗಿಂತ ಪ್ರಜಾನಾಥನ ಪಾರಮ್ಯಕ್ಕೆ ಯಾವ ರೀತಿಯಲ್ಲೂ ತೊಂದರೆ ಏರ್ಪಡಕೂಡದು ಎಂಬ ಏಕೈಕ ಭಾವನೆಯಿಂದ, ಶ್ರೀ ವಿಷ್ಣು ಚಿತ್ತರ ನುಡಿಯಂತೆ, ಯಾವ ಧಕ್ಕೆಯೂ ಅಸುರರಿಂದ ಬರಕೂಡದು ಎಂಬ ಧೋರಣೆಯಿಂದ ಅವನಿಗೆ ಮಂಗಳವನ್ನು ಕೋರುತ್ತಾರೆ. ಇದು ನಾರ ಶಬ್ದದಲ್ಲಿ ಅಡಗಿರುವ ಚೇತನ ವರ್ಗ ಅಯನಾರ್ಥದ ಪರಿಶುದ್ಧತೆ, ಪಾರಮ್ಯಕ್ಕೆ ಯಾವ ಧಕ್ಕೆಯೂ ಏರ್ಪಡಲು ಅವಕಾಶ ನೀಡಬಾರದೆಂದು ಅವನಲ್ಲಿ ಮೊರೆಯಿಡುತ್ತಾರೆ.

ಅಂದರೆ ಪ್ರಣವದ ಕೊನೆಯ ಅಕ್ಷರವಾದ ಮಕಾರದಲ್ಲಿ ತೋರುವ ಜೀವನು ಜ್ಞಾನಿಯಾದುದರಿಂದ ಬಯಸುವುದು ಒಂದೇ. ಅದೇನೆಂದರೆ ಸರ್ವಕಾರಣವಾದ ಅಕಾರಕ್ಕೆ ಅದರ ವ್ಯಾಪಾರವಾದ ಸ್ವಭಾವಿಕ ರಕ್ಷಣಾ ವೃತ್ತಿಗೆ ಯಾವ ಧಕ್ಕೆಯೂ, ಮಕಾರದಲ್ಲಿ ಅಡಗಿಕೊಂಡಿರುವ ವಕ್ರಬುದ್ಧಿಯಾದ ರಾಕ್ಷಸಭೂತ ಚೇತನನಿಂದ ಯಾವ ಕಳಂಕವೂ ಏರ್ಪಡಕೂಡದು ಮತ್ತು ಸಾಧ್ಯವಾದರೆ ಅಸುರ ವರ್ಗವೂ ದೈವೀವೃತ್ತಿಯಿಂದ ಸ್ವರೂಪನಾಶನವನ್ನು ಉಳಿಸಿಕೊಳ್ಳಬಾರದು ಎಂಬುದೇ ಮಂಗಳಾಶಾಸನದ ಏಕಮಾತ್ರಧ್ಯೇಯ. ಇದೇ ಲೋಕಹಿತವಾದುದು.

ಭಗವತ್ಸಂಬಂಧ ಮತ್ತು ಅವನ ಸ್ವರೂಪವನ್ನು ಅರಿಯಲಾಗದ ಚೇತನ ಸ್ತೋಮಕ್ಕೆ ಸ್ವರೂಪನಾಶನವು ಏರ್ಪಡುವುದಲ್ಲದೆ, ಸಾಮಾಜಿಕ ದೌರ್ಜನ್ಯವು ಉಳಿದುಕೊಳ್ಳುತ್ತದೆ. ಈ ವಿಧವಾದ ಮಾಯೆಗೆ ಬಲಿಯಾದವರು ಭಗವಂತನ ಗುಣ, ಅವತಾರ, ನಡತೆ, ಅಂದರೆ ಸರ್ವಾತೀತನಾದವನು ತನ್ನ ಗುಣದಿಂದ ಇವರಿಗೆ ಕಾಣಿಸಿಕೊಂಡು ಅನುಕೂಲವನ್ನು ಸದಾಕಾಲ ಎಸಗುತ್ತಿರುವ ಪರಮಾತ್ಮನ ವರ್ತನೆ ಇವುಗಳನ್ನು ನೆನೆದರೆ ಆಸುರೀ ಭಾವನಾಶವಾಗುತ್ತದೆ.

ಪರಮ.....ಶಾಸ್ತ್ರೈಃ :-- ಅನುಪಮವಾದ ಔನ್ನತ್ಯವನ್ನು ಪಡೆದ ಸ್ವಭಾವದಿಂದ, ದೋಷರಹಿತವಾದ, ಮತ್ತು ನಿರ್ದೋಷತೆಯಿಂದ, ಎಂದೆಂದಿಗೂ ಏಕರೂಪವಾಗಿ ಉಳಿದುಕೊಂಡಿರುವ, ವೇದಾದಿ ಶಾಸ್ತ್ರಗಳು ನೋಟ ನಡತೆಗಳನ್ನು ಪ್ರಕಾಶಪಡಿಸಬಲ್ಲ ಶಬ್ದರಾಶಿ, ಮತ್ತು ಅದನ್ನು ಹಿಂಬಾಲಿಸಿರುವ ಸ್ಮೃತಿ ಇತಿಹಾಸ ಪುರಾಣಾದಿಗಳು. ಅಷ್ಟೇ ಅಲ್ಲದೆ ಶುಭಂಕರನಾದ ಭಗವಂತನ ವಿಷಯಲ್ಲಿ ಸಹಜವಾದ ಸ್ವರೂಪ ವೃತ್ತಿಗಳನ್ನು ಪೂರ್ಣವಾಗಿ ಅರಿತಿರುವ ದಿವ್ಯಜ್ಞಾನಿಗಳ ಸ್ಪಷ್ಟ ನೋಟಗಳನ್ನು ಒಳಗೊಂಡ, ನುಡಿಗಳಿಂದ ಪ್ರಯೋಜನ ಪಡೆಯಲಾಗದೆ, ಅದನ್ನು ತಿಳಿಯಬೇಕೆಂಬ ಇಚ್ಛೆಯೂ ಇಲ್ಲದೆ ಇರುವವರು ಮೂರ್ಖತನದಿಂದ ನಿರಂತರ ತತ್ವಜ್ಞಾನ ಶೂನ್ಯರಾಗಿ ಉಳಿದುಕೊಳ್ಳುವರು.

ಪ್ರಕೃತಿಯಲ್ಲಿ ದೈವೀವರ್ಗಕ್ಕೆ ತೊಂದರೆ ತಪ್ಪಿದುದಲ್ಲ. ಆದರೆ ವಿಘ್ನದಿಂದ ಕೂಡಿದ್ದರೂ ವಿಘ್ನವಿನಾಶ ಖಚಿತ ಎಂಬುದು ಸಂಸಾರದಲ್ಲೂ ದೈವೀ ಪ್ರಕೃತಿಗೆ ತಿಳಿಯುತ್ತದೆ. ಅವರು ಕಂಟಕವನ್ನು ಗಮನಿಸದೆ ದೈವೀವೃತ್ತಿಯಲ್ಲಿ ಉಳಿದುಕೊ

ಳ್ಳುತ್ತಾರೆ. ಇದು ಮೂಲತಃ ದೇವಾಸುರ ವಿಭಜನಗ ಕಾರಣ.

ಒಟ್ಟಿನಲ್ಲಿ ಈಶ -- ಈಶಿತನ್ನ ಸಂಸರ್ಗದ ಪ್ರಭಾವದಿಂದ ಆಸುರೀ ಕಿರುಕುಳವು ನಿರಂತರವಾಗಿ ನಾಶ ಪಡೆಯುತ್ತದೆ. ಪರಕಾಲದಿವ್ಯಸೂರಿಯ ನುಡಿಯಲ್ಲಿ ತೋರಿರುವುದನ್ನು ಪ್ರಪನ್ನಗಾಯತ್ರಿಯ ೭ನೆಯ ಪದ್ಯದಲ್ಲಿ ಹೀಗೆ ನುಡಿಯಲಾಗಿದೆ. "ತೆನ್ನ ರಂಗನ್ ಕಮಲ ಪದಂಗಳ್ ನೆಂಜಿಲ್‌ಕೊಳ್ಳಾ ಮನುಷ್ಯರೆ ನೀಂಗಿ" ಅಂದರೆ ಪ್ರತ್ಯಕ್ಷ ಪರಮಪದವಾದ ಶ್ರೀರಂಗದಲ್ಲಿ ಶ್ರೀರಂಗನಾಥನ ಪದಕಮಲಗಳಲ್ಲಿ ನಂಬಿಕೆಯಿಲ್ಲದವರು ಅಸುರರು. ನಂಬಿ ಕೆಟ್ಟವರಿಲ್ಲವೋ, ರಂಗಯ್ಯನ ನಂಬಿದೆ ಕೆಟ್ಟರೆ ಕೆಡಲಿ" ಎಂದಿದ್ದಾರೆ ದಾಸಶ್ರೇಷ್ಠರಾದ ಪುರಂದರದಾಸರು. ಅಂಥವರನ್ನು ನೀಂಗಿ ಎಂದರೆ ಎದುರಾಳಿಗಳನ್ನಾಗಿ ಮಾಡಿಕೊಂಡು ಹೋರಾಡಿ ಜಯಪಡೆಯಬೇಕಾದುದು ಶ್ರಮ. ಅವರಲ್ಲಿ ವೈಮುಖ್ಯವಿದ್ದರೆ ಸಾಕು. ಅದು ದ್ವೇಷವಾಗಿ ಪರಿಣಮಿಸಕೂಡದು. ಅಂದರೆ ಅಸುರರ ಅಸುರತ್ವ ಸ್ವಾಭಾವಿಕವಲ್ಲ ಔಪಾಧಿಕ. ಉಪಾಧಿ ಕಳೆದರೆ ಅವರೂ ದೈವೀ ಸ್ವಭಾವದವರಾಗಿ ಉಳಿದುಕೊಳ್ಳುತ್ತಾರೆ. ಈ ಉಪಾಧಿಯಾದ ಆಸುರೀಭಾವ ನಾಶವಾಗುವರೆಗೂ ಅವರಿಗೆ ಸ್ವಾಭಾವಿಕ ಜ್ಞಾನವು ಭಾಸವಾಗುವುದಿಲ್ಲ ಎಂದು ಆಚಾರ್ಯರು ವಿಶ್ಲೇಷಿಸಿದ್ದಾರೆ.

ಶ್ಲೋಕ : 16

ಉಲ್ಲಂಘಿತ ತ್ರಿವಿಧ
ಸೀಮ ಸಮಾತಿಶಾಯಿ
ಸಂಭಾವನಂ ತವ
ಪರಿಬ್ರಡಿಮ ಸ್ವಭಾವಂ
ಮಾಯಾ ಬಲೇನ
ಭವತಾಪಿ ನಿಗೂಹ್ಯಮಾನಂ
ಪಶ್ಯಂತಿ ಕೇಚಿತ್
ಅನಿಶಂ ತ್ವದನನ್ಯಭಾವಾಃ

ಭಾವಾರ್ಥ :-- ದೇಶ, ಕಾಲ, ವಿಷಯ ಎಂಬ ಮೂರು ವಿಧವಾದ ಎಲ್ಲೆಗಳುಳ್ಳ ಸಮ ಅಥವಾ ಅಧಿಕ ಎಂಬ ಶಂಕೆಯನ್ನು ದಾಟಿರುವ ನಿನ್ನ ಮಹಾ ಪ್ರಭುತ್ವವನ್ನು ನೀನು ಮಾಯಾ ಬಲದಿಂದ ಮರೆಯಿಸುತ್ತಿದ್ದರೂ, ಏಕಮನಸ್ಕರಾದ ಕೆಲವರು ಮಾತ್ರ ಯಾವಾಗಲೂ ನೋಡುತ್ತಲೇ ಇದ್ದಾರೆ.

ವಿಶೇಷಾರ್ಥ :-- ಭಗವಂತ ಅಥವಾ ಪರಬ್ರಹ್ಮನಿಗೆ ಸ್ವಸದೃಶ ಪದಾರ್ಥವು ಯಾವರೀತಿಯೂ ಇಲ್ಲವೆಂಬುದು ಈಶ್ವರ ಶಬ್ದದಲ್ಲಿ, ಬ್ರಹ್ಮ ಸತ್ ಎಂಬ ಪದಗಳಿಂದ ಸ್ಥಿರಪಟ್ಟಿದೆ. ಅನನ್ಯಭಾವಾಃ -- ಅನ [illegible] ಮೇಲೆ ಸಾದೃಶ್ಯ ಭಾವನೆ ಅಳಿದು, ಶೇಷತ್ವ ಭಾವನೆಯನ್ನು ಉಳಿಸಿಕೊಂಡು ಭಗವಂತನಲ್ಲಿಯೇ ಸದಾ ವಾಸಮಾಡುವುದು ಅನನ್ಯತ್ವ. ಬೇರೆ ಅಲ್ಲ, ಒಂದೇ ಅಲ್ಲ ಎಂಬುದೇ ಅನನ್ಯತ್ವ. ಇದು ಶರೀರಾತ್ಮಸಂಬಂಧ. ಜೀವಾತ್ಮನು ಭಗವಂತನಿಗೆ 'ಯಸ್ಯಾತ್ಮಾ ಶರೀರಂ, ಯಸ್ಯಪೃಥಿವೀ ಶರೀರಂ' ಎಂಬ ಚೇತನ ಸ್ವರೂಪ ಮತ್ತು ಸಂಬಂಧವನ್ನು ಒಳಪಡಿಸಿಕೊಂಡಿರುವುದು ತತ್ವತ್ರಯದ ಏಕತ್ವಾರ್ಥ. ಇದು ವಿಶಿಷ್ಟವಾದ ಅದ್ವೈತ.

ಇದನ್ನು ಯಾಮುನಾಚಾರ್ಯರು ಮನಗಂಡು, ಅನನ್ಯ ಭಾವನೆಯನ್ನು ಉಳಿಸಿಕೊಳ್ಳಬಲ್ಲ ಸಂಸ್ಕಾರ ಪಡೆದವರಿಗೆ, ಎಷ್ಟೇ ಅಡಚಣೆಗಳು ಬಂದರೂ, ವಿವಿಧ ಭಾವನೆಗಳು ತೋರಿಬಂದರೂ, ಅವರ ಮನಸ್ಸು ಅನನ್ಯತ್ವವನ್ನು ಮರೆಯುವುದಿಲ್ಲ. ಇವರು ದೈವೀ ವರ್ಗದವರು. ಈ ಗುಂಪಿನನಾಯಕ ಪರಾಂಕುಶರು. ತಮ್ಮ ನೋಟ ನಡತೆಗಳಿಂದ ಪ್ರಪನ್ನ ಜನಕೂಟಸ್ಥರಾದರೆಂದು ಯಾಮುನಾರ್ಯರ ಸ್ಪಷ್ಟ ನುಡಿ. ಆ ಪರಂಪರೆಗೆ ಸೇರಿದವರು ಅನನ್ಯರು. ಭಗವಂತನ ಸಂಬಂಧವನ್ನು ಪಡೆದು ತತ್ಪರಿಣಾಮವಾಗಿ ತಮ್ಮ ಉತ್ಪತ್ತಿ, ಸ್ಥಿತಿ, ಲಯಗಳನ್ನು ಅರಿತಿರುವವರು. 'ಸಂಬಂಧಾತ್ ಸ್ವಾತ್ಮಲಾಭಃ' -- ಉಳಿಕೆಯು ಪರಮಾತ್ಮನ ಸಂಸರ್ಗದಿಂದಲೇ ವಿನಾ ಪ್ರತ್ಯೇಕವಾಗಲಾರದು ಎಂದು ಸುಸ್ಪಷ್ಟನುಡಿ.

ಸತ್ಸಂಪ್ರದಾಯವೆಂದರೆ ಸತ್ ಪದಾರ್ಥವಾದ ಪರಬ್ರಹ್ಮನ ಸಂಕಲ್ಪ, ಅದರ ಅನುವೃತ್ತಿ ಎಂದು ಹೆಸರು. ಯಾವಕಾಲದಲ್ಲೂ, ಸನ್ನಿವೇಶದಲ್ಲೂ ಈ ಸಂಪ್ರದಾಯವು ಉಳಿದುಕೊಂಡುಬರುತ್ತದೆ. ಆ ಭಾಗ್ಯವನ್ನು ಪಡೆದವರು, ಮಾಯೆಯ ಪ್ರಯೋಗದಿಂದ ಭಗವಂತನು ಅನ್ಯಭಾವನೆಗಳನ್ನು ಎಷ್ಟೇ ರೂಪದಲ್ಲಿ ಪ್ರಕಾಶಪಡಿಸಿದರೂ, ಅದು ವಿಡಂಬನೆಯೆಂದು ಮನಗಂಡು, ಮೂಲಭಾವನೆಯಾದ ಅನನ್ಯತ್ವವನ್ನು ಎಂದಿಗೂ ಮರೆಯಲಾರರು. ಭಗವಂತನ ಮಾಯೆಯು ಅನನ್ಯತ್ವ ಪ್ರಭಾವ ಪ್ರದರ್ಶಿತವಾದ ಒಂದು ಪರೀಕ್ಷೆ. ಭಗವತ್‌ಶರೀರ, ಅನನ್ಯತ್ವ ಹೋದರೆ ಭಗವಂತನ ಸಂಕಲ್ಪಕ್ಕೆ ಭಂಗವಾಗುವುದು. ಆದ್ದರಿಂದ ಚೇತನನು ಸರ್ವಾವಸ್ಥೆಯಲ್ಲೂ ಜ್ಞಾನದ್ರವ್ಯವಾದ್ದರಿಂದ, ಅನನ್ಯತ್ವಭಾವನೆಯು ಏಕರೂಪವಾಗಿ ಉಳಿದುಕೊಂಡು ಭಾಸವಾಗುತ್ತಾ ಅಮೃತಸಾಗರ ಅಂತರ್ನಿಮಗ್ನ ಸರ್ವಾವಯವನಾಗಿ ಸುಖವಾಗಿ ಬಾಳುತ್ತಾನೆ. ಅನನ್ಯತ್ವದ ಪ್ರಭಾವದಿಂದ ಅವನಿಗೆ ನರಕವೇ ಇಲ್ಲ. ಇದರ ತಾತ್ಪರ್ಯ 'ಸದಾ ಪಶ್ಯಂತಿ ಸೂರಯಃ'.



ಸಪ್ತಗಿರಿ

## ಬರಹಗಾರರಿಗೆ ಸೂಚನೆ :

ಸಪ್ತಗಿರಿ ಕನ್ನಡ ಮಾಸಪತ್ರಿಕೆ ಅಧ್ಯಾತ್ಮಿಕ, ಸಾಂಸ್ಕೃತಿಕ ಪ್ರಸಾರದ ಉದ್ದೇಶ ಹೊಂದಿ ಹೊರಬರುತ್ತಿರುವ ಪತ್ರಿಕೆ. ಈ ಪತ್ರಿಕೆಯಲ್ಲಿ ಪ್ರಕಟನೆಗಾಗಿ ಲೇಖನಗಳನ್ನು, ಕವನ, ಕೀರ್ತನೆ, ಭಾವ, ಛಾಯಾಚಿತ್ರಗಳನ್ನು ಕಳುಹಿಸಬಯಸುವವರು ಕೆಳಗಣ ಸೂಚನೆಗಳನ್ನು ಗಮನಿಸಬೇಕು.

೧) ಲೇಖನಗಳು ಆರು ಫುಲ್‌ಸ್ಕೇಪ್ ಹಾಳೆಗಳ ಮಿತಿಯಲ್ಲಿ ಹಾಳೆಯ ಒಂದೇ ಕಡೆ ಬರೆಯಲಾಗಿರಬೇಕು. ಟೈಪ್‌ಮಾಡಿದ ಲೇಖನಗಳು ಅಪೇಕ್ಷಣೀಯ.

೨) ದೇವಸ್ಥಾನ ಮೊದಲಾದ ಪ್ರಾಚ್ಯ ಅರ್ವಾಚೀನ ಸಾಂಸ್ಕೃತಿಕ ವಸ್ತು ವಿಷಯಗಳ ಬರಹಗಳು ತತ್ಸಂಬಂಧಿ ಫೋಟೋಗಳನ್ನೂ ಒಳಗೊಂಡಿದ್ದರೆ ಅನುಕೂಲಕರ.

೩) ಚಿತ್ರಗಳನ್ನು ಇಂಡಿಯನ್ ಇಂಕಿನಲ್ಲೇ ಬರೆಯಬೇಕು.

೪) ಕೇವಲ ಫೋಟೋಗಳನ್ನು ಮಾತ್ರ ಕಳುಹಿಸುವವರು, ಸ್ಪಷ್ಟವಾದವುಗಳನ್ನು ಪೂರ್ತಿ ವಿವರಗಳೊಂದಿಗೆ ಕಳುಹಿಸಬೇಕು.

೫) ಸಪ್ತಗಿರಿಯ ತೆಲುಗು, ತಮಿಳು, ಹಿಂದಿ, ಆಂಗ್ಲ ಭಾಷಾ ಪತ್ರಿಕೆಗಳಿಂದ ಅನುವಾದ ಲೇಖನಗಳು ಅಗತ್ಯವಿಲ್ಲ.

೬) ಗೃಹ ಲಕ್ಷ್ಮಿ, ಕಿಶೋರಜಗತ್ ಮೊದಲಾದ ಶೀರ್ಷಿಕೆಗಳಿಗೆ ತಕ್ಕಂತಹ ಕಥೆ, ಪ್ರಬಂಧಗಳನ್ನೂ ಕಳುಹಿಸಬಹುದು.

೭) ಪ್ರಕಟವಾದ ಲೇಖನಗಳಿಗೆ ಸೂಕ್ತ ಸಂಭಾವನೆ ಉಂಟು.

ಮಿಕ್ಕ ವಿವರಗಳಿಗೆ :

**ಸಂಪಾದಕರು**

ಸಪ್ತಗಿರಿ

ತಿ. ತಿ. ದೇವಸ್ಥಾನ, ತಿರುಪತಿ--೫೧೭ ೫೦೭

ಚಿತ್ತೂರು ಜಿಲ್ಲೆ, ಆಂ. ಪ್ರ

# ಶ್ರಾವಣದ ಮಹತ್ವ

---ಸಾಲೀಮಠ ದೊಡ್ಡಯ್ಯಶಾಸ್ತ್ರಿ.

ಣಮಾಸವು ತುಂಬಾ ಪವಿತ್ರವಾದ ಮತ್ತು ದೇವರ ಕೃಪೆಗೆ ಪಾತ್ರವನ್ನಾಗಿಸುವ ಶ್ರೇಷ್ಠಮಾಸವಾಗಿದೆ. ಈ ಪುಣ್ಯತರವಾದ ಶ್ರಾವಣ ಮಾಸ ಶಿವನ, ಶಿವಶರಣರ ಪಾವನ ಚರಿತ್ರೆಯನ್ನು ಶ್ರವಣಮಾಡಲು ತಕ್ಕುದಾಗಿದೆ. ಶ್ರವಣ ಎಂದರೆ ಆಲಿಸು ಎಂದರ್ಥ. ಈ ಶ್ರಾವಣಮಾಸದಲ್ಲಿ ಪುರಾಣ, ಪ್ರವಚನ, ಕೀರ್ತನೆ, ಭಜನೆಯನ್ನು ಕೇಳಿ ಆತ್ಮೋದ್ಧಾರ ಮಾಡಿಕೊಳ್ಳುವುದೇ ಈ ಮಾಸದ ಉದಾತ್ತ ಉದ್ದೇಶವಾಗಿದೆ. ಈ ತಿಂಗಳಾದ್ಯಂತ ಎಲ್ಲೆಡೆ ಮಠಮಂದಿರಗಳಲ್ಲಿ ಪುರಾಣ, ಪುಣ್ಯಕಥೆಗಳನ್ನು ಏರ್ಪಡಿಸಿ ಕೇಳುಗರಿಗೆ ಜ್ಞಾನವವನ್ನು ನೀಡಿ ಹುಟ್ಟಿ ಬಂದ ಗುಟ್ಟನ್ನು ಅರುಹಿ ಮಾನವ ಜನ್ಮದ ಪರಮ ಚರಮಗುರಿಯನ್ನು ತಿಳಿಸುತ್ತಾರೆ.

ನವವಿಧ ಭಕ್ತಿಯಲ್ಲಿ ಶ್ರವಣ ಭಕ್ತಿ ಪ್ರಥಮವಾಗಿದೆ. ಇದೇ ಪಾರಮಾರ್ಥಿಕ ದಿವ್ಯ ಭವ್ಯಮಂಟಪವನ್ನೇರಲು ಮೊದಲನೆಯ ಸೋಪಾನವಾಗಿದೆ. ಪುರಾಣ, ಕೀರ್ತನೆಯನ್ನು ಆಲಿಸುವುದರಿಂದ ಅನೇಕ ತರಹದ ಲಾಭವುಂಟಾಗುತ್ತದೆ. ಈ ಮಾತಿಗೆ ಪುಷ್ಟಿಯನ್ನು ನೀಡಲು ಒಬ್ಬ ಸುಭಾಷಿತಕಾರನು ಹೀಗೆ ಹೇಳಿದ್ದಾನೆ, "ಶ್ರುತ್ವಾಧರ್ಮಂ ವಿಜಾನಾತಿ, ಶ್ರುತ್ವಾ ತ್ಯಜತಿ, ದುರ್ಮತಿಂ; ಶ್ರುತ್ವಾಜ್ಞಾನಮವಾಪ್ನೋತಿ, ಶ್ರುತ್ವಾ ಮೋಕ್ಷಂಚ ವಿಂದತಿ" ಇದರರ್ಥ ಇಂತಿದೆ --ಶ್ರುತ್ವಾ ಅಂದರೆ ಕೇಳುವುದರಿಂದ ಧರ್ಮ ತಿಳಿಯುವುದು ದುರ್ಗುಣದೂರವಾಗಿ ಜ್ಞಾನಪ್ರಾಪ್ತವಾಗುವುದು. ಪುಣ್ಯ ಶ್ರವಣದಿಂದ ಮೋಕ್ಷ ಲಭಿಸುವುದು.

ಮನುಷ್ಯನ ಜೀವನದಲ್ಲಿ ಪುರಾಣ ಪುಣ್ಯಕಥೆ ಆಲಿಸುವ ಈ ಸತ್ಸಂಗ ಶ್ರೇಷ್ಠ ಅಮೃತ ಕೊಡುಗೆಯಾಗಿದೆ. ಜೀವನವನ್ನು ಪಾವನವನ್ನಾಗಿಸಲು ದಿವ್ಯ ಸಾಧನವಾಗಿದೆ. ಅದಕ್ಕಾಗಿಯೇ ಸಂತತುಕಾರಾಮರವರು ತಮ್ಮದೊಂದು ಅಭಂಗದಲ್ಲಿ "ಸಜ್ಜನ ಸಂಗತಿ ರೇಕಾ ಭವತಿ ಭವಾರ್ಣವ ತಾರಣ ನೌಕಾ" ಅಂದರೆ ಸತ್ಸಂಗವೆಂಬುದು ಭವಸಾಗರವನ್ನು ದಾಟಿಸುವ ನೌಕೆಯಿದ್ದಂತೆ ಎಂದು ಹೇಳಿದ್ದಾರೆ. ಇದನ್ನರಿತಾಗ ಶ್ರವಣ ಲಾಭ ಎಷ್ಟು ಮಹತ್ತರವಾಗಿದೆಯೆಂಬುದು ಮನವರಿಕೆಯಾಗುತ್ತದೆ.

ಶ್ರಾವಣ ಮಾಸದಲ್ಲಿ ಶ್ರವಣ ಮಾಡುವ ಪುರಾಣ, ಕೀರ್ತನೆಯ ಪ್ರಯೋಜನವನ್ನು ಶಿವಭಜನೆಯ ಉತ್ಕೃಷ್ಟ ಉಪಯೋಗವನ್ನೀಗ ನಾವು ತಿಳಿಯುವುದು ಯಥೋಚಿತವಾಗಿದೆ. ಪುರಾಣದಲ್ಲಿ ಪುರಾಣಿಕರು ಮಹಾತ್ಮರ ಜೀವನ, ಚರಿತ್ರೆಯನ್ನು ಸವಿಸ್ತಾರವಾಗಿ ತಿಳಿಸುತ್ತಾರೆ. ಪುರಾಣ ಪುರುಷರ ಜೀವನಾನುಭವ ಅಧ್ಯಾತ್ಮಸಾಧನೆ, ಆಚರಣೆಗಳ ಕುರಿತು ಸೊಗಸಾಗಿ ವಿವರಿಸುತ್ತಾರೆ. ಈ ಪುರಾಣದ ಪುಣ್ಯ ಶ್ರವಣದಿಂದ ಕೇಳುಗರಿಗೆ ಜ್ಞಾನಪ್ರಾಪ್ತಿಯಾಗುವುದಲ್ಲದೆ ತಾವೂ ಪುರಾಣ ಪುರುಷರಂತೆ ಬಾಳಬೇಕೆಂಬ ಇಚ್ಛೆಯನ್ನು ಬಲಗೊಳಿಸುತ್ತದೆ. ಶಿವಕೀರ್ತನೆಯಲ್ಲಿ ಕೀರ್ತನಕಾರರು ದಿನಕ್ಕೊಬ್ಬ ಮಹಾಪುರುಷರ ಪುಣ್ಯಸ್ತ್ರೀಯರ ಜೀವನ ಚರಿತ್ರೆಯನ್ನು ಸಂಗೀತ ಸಾಹಿತ್ಯದೊಂದಿಗೆ ಮನಮುಟ್ಟುವಂತೆ ತಿಳಿಸುತ್ತಾರೆ. ಕೀರ್ತನೆ ಕೇಳುವುದರಿಂದ ಮನಃಪರಿವರ್ತನೆ ಹೊಂದಿ ಸದ್ವರ್ತನೆ ಬೆಳೆಯಲು ಸಹಾಯಕವಾಗುತ್ತದೆ. ಈ ಶ್ರಾವಣಮಾಸದಲ್ಲಿ ಶಿವಭಜನೆ ಕೇಳುವುದರಿಂದ ಪುಣ್ಯಲಭಿಸಿ ಪಾರಮಾರ್ಥಿಕದ ಪಥ ದೊರೆತು ಪರಮೇಶ್ವರನ ಕೃಪೆ ದೊರೆಯುತ್ತದೆ. ಭಜನೆಯ ಅಕ್ಷರಾರ್ಥ ಇಂತಿದೆ. ಭ ಎಂದರೆ ಭವದ, ಜ ಎಂದರೆ ಜಂಜಾಟ ನ ಎಂದರೆ ಇಲ್ಲ. ಅಂದರೆ ಯಾರು ಭಕ್ತಿಯಿಂದ ಭಜನೆ ಮಾಡುವರೋ ಅಂತಹವರಿಗೆ ಭವದ ಜಂಜಾಟ ಇಲ್ಲ. ವಿಭಜನ ಎಂದರೆ ಬೇರೆಮಾಡುವುದು ಎಂದರ್ಥ. ಭಜನೆ ಎಂದರೆ ಕೂಡಿಸುವುದು ಎಂದರ್ಥ. ಅಂದರೆ ಪ್ರಾಪಂಚಿಕತೆಗೆ ಅಂಟಿಕೊಂಡು ಪಾರಮಾರ್ಥಿಕತೆಗೆ ವಿಭಜನೆಯಾದ ನಮ್ಮ ಮನಸ್ಸನ್ನು ದೇವರ ಕಡೆಗೆ ಕೊಡಿಸುವುದೇ ಭಜನೆಯ ವೈಶಿಷ್ಟ್ಯವಾಗಿದೆ. ಅದಕ್ಕಾಗಿ ನಾವು ಈ ಶ್ರಾವಣಮಾಸದಲ್ಲಿ ಪುರಾಣ, ಕೀರ್ತನೆ, ಪ್ರವಚನ ಆಲಿಸಿ ಆತ್ಮೋದ್ಧಾರ ಮಾಡಿಕೊಳ್ಳುವುದು ಸೂಕ್ತವಾಗಿದೆ.

ಶ್ರಾವಣಮಾಸದಲ್ಲಿ ಮಳೆಯಾಗುತ್ತದೆ. ಈ ಮಳೆಗೆ ಹುತ್ತ ತೊಯ್ದು ಅದರಲ್ಲಿದ್ದ ಹಾವುಗಳು ಹೊರಗೆ ಬರುವುದುಂಟು.ಅವುಗಳನ್ನು ದಯಾಂತಃಕರಣದಿಂದ ಕಾಣಬೇಕೆಂಬ ದೃಷ್ಟಿಯಿಂದ "ನಾಗಪಂಚಮಿ"ಯ ಆಚರಣೆ ಬಳಕೆಯಲ್ಲಿ ಬಂದಿದೆ. ಶ್ರಾವಣಮಾಸದಲ್ಲಿ ನಾಗಪಂಚಮಿ ಸರ್ವರ ಸಂತಸದ ಹಬ್ಬವಾಗಿದೆ. ಈ ಮಾಸದಲ್ಲಿ ಬರುವ ೪ ಸೋಮವಾರ ಪವಿತ್ರವಾಗಿದೆ. ಮಹಾತ್ಮರ ದರ್ಶನಕ್ಕೆ ಜಂಗಮರ ಪುಣ್ಯಾರಾಧನೆ, ಪ್ರಸಾದ ವಿತರಣೆಗೆ ಪ್ರಸಕ್ತವಾಗಿದೆ. ಒಟ್ಟಾರೆ ಈ ಶ್ರಾವಣಮಾಸ ಕೇಳುಗರ ಮನಸಂತೋಷಕ್ಕೆ ಜ್ಞಾನವಿಕಾಸಕ್ಕೆ ಹಾಗೂ ಬಾಳಿನ ಉತ್ಕರ್ಷಕ್ಕೆ ಉತ್ತಮ ಸಾಧನವಾಗಿದೆ.



# ಶಾಂಭವೀ ವಿದ್ಯೆ

---ವಿದ್ವಾನ್ 'ರಘುಸುತ'.

ಶಿವೋಪಾಸನೆಯು ಪ್ರಪಂಚದ ಅತ್ಯಂತ ಪ್ರಾಚೀನ ಉಪಾಸನೆಯಾಗಿದೆ. ಈ ಉಪಾಸನೆಯಲ್ಲಿ 'ಶಾಂಭವೀ ವಿದ್ಯೆ'ಯನ್ನು ಅತ್ಯಂತ ಗೋಪ್ಯವಾಗಿಡಲು ಆದೇಶಿಸಲಾಗಿದೆ.

ಶಾಂಭವೀ ಎಂದರೆ ದುರ್ಗಾದೇವಿ, ಪಾರ್ವತಿ ಎಂದರ್ಥ. ದುರ್ಗಾದೇವಿಯ ಪೂಜೆ ಎನ್ನುವುದು ಈ ಪದ ಪ್ರಯೋಗದ ಒಂದು ಅರ್ಥ. ಶಾಂಭವ ಎಂದರೆ ಈಶ್ವರನ ಭಕ್ತ, ಈಶ್ವರನನ್ನು ಪೂಜಿಸುವವನು ಎಂದರ್ಥವೂ ಇದೆ. ಈಶ್ವರನ ಪೂಜೆಗೆ ಸಂಬಂಧಪಟ್ಟದ್ದು ಎಂದಿರುವುದರಿಂದ 'ಈಶ್ವರನ ಗುಪ್ತ ಪೂಜೆ' ಎಂಬ ಭಾವಾರ್ಥವೂ ಉಂಟಾಗುತ್ತದೆ.

ಈ ವಿದ್ಯೆಯ ಮೂಲ ಉಪದೇಷ್ಟನು ಭಗವಾನ್ ಶಂಭುವಾಗಿರುವನು. 'ಶಂಭು' ಎನ್ನುವ ಪದ ಎಷ್ಟು ವಿಸ್ತಾರವಾಗಿದೆಯೆಂದರೆ ಈ ಪದವು ಪರಮೇಶ್ವರನಿಗೆ ಅನ್ವಯಿಸುವುದೇ ಅಲ್ಲದೆ ಚತುರ್ಮುಖ ಬ್ರಹ್ಮ ಏಕಾದಶ ರುದ್ರರಲ್ಲಿ ಒಬ್ಬ, ವಿಷ್ಣು, ಸಿದ್ಧಪುರುಷ, 'ಶಂಭುರ್ಬ್ರಹ್ಮಾರ್ಹಂತೋಃ ಶಿವೆ' ಎಂದಿರುವುದರಿಂದ 'ಶಾಂಭವೀ ವಿದ್ಯೆ'ಯು ಇವರೆಲ್ಲರಿಗೂ ಅನ್ವಯವಾಗುವಂತಹುದಾಗಿದೆ. ಆದುದರಿಂದ ಇದನ್ನೇ 'ಶಾಂಭವೀ ವಿದ್ಯೆ' ಎಂದೂ ಕರೆಯಲಾಗುವುದು.

'ಸ್ವಯಂ ಬೋಧ ಅಮನಸ್ಕ ಯೋಗ' ಎನ್ನುವ ಹೆಸರಿನ ಗ್ರಂಥದಲ್ಲಿ ಹೀಕೆಂದು ಹೇಳಲಾಗಿದೆ--

ಗುಹ್ಯಾತ್ ಗುಹ್ಯತರಾ ವಿದ್ಯಾ
ನ ದೇಯಾ ಯಸ್ಯ ಕಸ್ಯಚಿತ್
ಏತಜ್ಜನಂ ವಸೇದ್ ಯತ್ರ
ಸ ದೇಶಃ ಪುಣ್ಯ ಭಾಜನಮ್
(ಉತ್ತರಾರ್ಧ 12)

ಅಂದರೆ ಈ ಶಾಂಭ ವೀ ವಿದ್ಯೆಯು ಅತ್ಯಂತ ರಹಸ್ಯಮಯ ವಿದ್ಯೆಯಾಗಿದೆ. ಇದನ್ನು ಯಾವನೇ ಸಾಮಾನ್ಯ ವ್ಯಕ್ತಿಗೂ ನೀಡಬಾರದು. (ಪರೀಕ್ಷೆ ನಡೆಸಿದ ನಂತರದಲ್ಲಿ ಯೋಗ್ಯ ವ್ಯಕ್ತಿಗೇ ತಿಳಿಸಬೇಕು.) ಈ ಜ್ಞಾನ ಇರುವೆಡೆಯಲ್ಲಿ, ಆ (ದೇಹವು) ದೇಶವು ಪುಣ್ಯ ದೇಶವಾಗಿರುವುದೇ ಅಲ್ಲದೆ ಅಲ್ಲಿನ ಜನರು (ಅಂಗಾಂಗಗಳು) ಪುಣ್ಯಾತ್ಮರುಗಳಾಗಿರುತ್ತಾರೆ.

ದರ್ಶನಾತ್ ಸ್ಪರ್ಶನಾತ್ ತಸ್ಯ
ತ್ರಿಸಪ್ತ ಕುಲಸಂಯುತಾಃ
ಜನಾ ಮುಕ್ತಿಪದಂ ಯಾಂತಿ
ಕಿಂ ಪುನಸ್ತತ್ಪರಾಯಣಾಃ

ಅಂದರೆ 'ಶಾಂಭವೀ -- ವಿದ್ಯೆಯ ಸಿದ್ಧಿಯನ್ನು ಪಡೆದಿರುವ ಮಹಾತ್ಮರ ದರ್ಶನ ಹಾಗೂ ಸ್ಪರ್ಶದಿಂದ ಮಾನವನು ೨೧ ಕುಲಗಳೊಂದಿಗೆ ಮುಕ್ತಿಯನ್ನು ಪಡೆಯುತ್ತಾನೆ. ಆ ದೇಶದ ನಿವಾಸಿಗಳು ಅಥವಾ ಅವರ ಸೇವಕರುಗಳ ವಿಷಯವನ್ನೇನು ಹೇಳಬೇಕಾದುದೇ ಇಲ್ಲ'.

'ಶಾಂಭವೀ ವಿದ್ಯೆ'ಯ ವಿಷಯದಲ್ಲಿ ರಹಸ್ಯೋದ್ಘಾಟನ ಮಾಡುತ್ತಾ ಹೀಗೆಂದು ಹೇಳಲಾಗುತ್ತದೆ--

ಅಂತರ್ಲಕ್ಷ್ಯ ಬಹಿರ್ದೃಷ್ಟಿ-
ನಿರ್ಮೇಷೋನ್ಮೇಷವರ್ಜಿತಾ
ಏಷಾ ಹಿ ಶಾಂಭವೀ ಮುದ್ರಾ
ಸರ್ವಶಾಸ್ತ್ರೇಷು ಗೋಪಿತಾ
(ಅಮನಸ್ಕಯೋಗ, ಉತ್ತರಾರ್ಧ 10)

ಅಂದರೆ 'ಈ ಶಾಂಭವೀ ವಿದ್ಯೆ' (ಮುದ್ರೆ)ಯು ಅಂತರ್ಲಕ್ಷವಾಗಿಯೂ, ಬಹಿರ್ದೃಷ್ಟಿಯಾದುದೂ ಹಾಗೂ ನಿಮೇಷ -- ಉನ್ಮೇಷಗಳಿಂದ ಮುಕ್ತವಾದುದೂ ಆಗಿದೆ. ಅಂದರೆ ಶಾಂಭವೀ ಮುದ್ರೆಯಲ್ಲಿ ಬಹಿರ್ದೃಷ್ಟಿ ಇದ್ದಾಗ್ಯೂ ಅಂತರ್ಲಕ್ಷ್ಯವಿರುತ್ತದೆ. ಮತ್ತು ದೃಷ್ಟಿಯಲ್ಲಿ ನಿಮೇಷ ಮತ್ತು ಉನ್ಮೇಷ ಇರುವುದಿಲ್ಲ. ಇದು ಎಲ್ಲ ಶಾಸ್ತ್ರಗಳಲ್ಲಿಯೂ ಗೋಪನೀಯವಾದುದು.

'ಶಾಂಭವೀ ವಿದ್ಯೆ'ಯು 'ಆದಿಶಕ್ತಿ ಉಮಾ ಸ್ವರೂಪಿಣೀ'ಯದ್ದೆ ಆಗಿದೆ ಎಂದೂ, ಇದು ಶಂಭುವಿನಿಂದ ಆವಿರ್ಭೂತವಾದದ್ದು ಎಂದೂ ಹೇಳಲಾಗುತ್ತದೆ.

ಆದಿಶಕ್ತಿರೂಪಾ ಚೈಷಾ
ಮತ್ತೋ ಜನ್ಮವತೀ ಪುರಾ
ಅಧುನಾ ಜನ್ಮಸಂಸ್ಕಾರಾತ್
ತ್ವಮೇಕೋ ಲಬ್ಧವಾನಸಿ

ಮುಂದುವರೆದು ಹೀಗೆ ಹೇಳಲಾಗಿದೆ -- 'ಹೂವಿನ ಮೂಲವು ಹಣ್ಣು ಆಗಿರುವಂತೆ ಹಣ್ಣು ಹೂವನ್ನು ನಾಶಮಾಡುವ ಅಂಶವೂ ಆಗಿದೆ. ಅಂತೆಯೇ 'ದೇಹ' ಎನ್ನುವುದು ತತ್ವವನ್ನು ಬೆಳಗುವ ಅಂಶವಾದರೆ, ತತ್ವವು ದೇಹವನ್ನು ನಾಶಮಾಡುವ ಅಂಶವಾಗಿರುತ್ತದೆ. ಮೂಢನು ಕುರಿಮರಿಯನ್ನು ಕಂಕುಳಲ್ಲಿ ಇರಿಸಿಕೊಂಡೇ, ಮೂರ್ಖತನದಿಂದ ಬಾವಿಯಲ್ಲಿ ಏನಾದರೂ ಇದೆಯೇನೋ ಎಂದು ಹುಡುಕಾಡುತ್ತಾನೆ. ಇದೇ ರೀತಿಯಲ್ಲಿ ಮೂಢನಾದ ಪುರುಷನು ತನ್ನಲ್ಲಿರುವ 'ತತ್ವ'ವನ್ನು ತಿಳಿದುಕೊಳ್ಳದೆ, ಬೇರೆ ಶಾಸ್ತ್ರಗಳ ಮೋಹಕ್ಕೆ ಬಿದ್ದು, ವ್ಯರ್ಥವಾಗಿ ಅವುಗಳನ್ನು ಓದುವ ಅಜ್ಞಾನದಲ್ಲಿ ಬಿದ್ದಿರುತ್ತಾನೆ'.

ಈ 'ಶಾಂಭವೀ ವಿದ್ಯೆ'ಯನ್ನು ಕಲಿಯುವುದು -- ಅರ್ಥಮಾಡಿಕೊಳ್ಳುವುದು ತುಂಬಾ ಕಷ್ಟದ ಕೆಲಸ. ಇದಕ್ಕೆ ಓರ್ವ 'ಸಮರ್ಥ ಸದ್ಗುರು' ಇರಲೇಬೇಕು. ಈ ಸದ್ಗುರುವಿನ ವಿಷಯದಲ್ಲಿ ಹೀಗೆಂದು ಹೇಳಲಾಗಿದೆ--

ದೃಷ್ಟಿಃ ಸ್ಥಿರಾ ಯಸ್ಯ ವಿನೈವ ದೃಶ್ಯಂ
ವಾಯುಃ ಸ್ಥಿರೋ ಯಸ್ಯ ವಿನಾ ಪ್ರಯತ್ನಂ
ಚಿತ್ತಂ ಸ್ಥಿರಂ ಯಸ್ಯ ವಿನಾವಲಂಬಂ
ಸ ಏವ ಯೋಗೀ ಸ ಗುರುಃ ಸ ಸೇವ್ಯಃ

'ದೃಶ್ಯವಿಲ್ಲದೆಯೆ ಯಾರ ದೃಷ್ಟಿಯು ಸ್ಥಿರವಾಗಿರುತ್ತದೆಯೊ, ಯಾವ ಪ್ರಯತ್ನವನ್ನೂ ಮಾಡದೆ ಯಾವ ಪ್ರಾಣವು ಸ್ಥಿರವಾಗಿರುತ್ತದೆಯೊ, ಯಾವ ಅವಲಂಬನವೂ ಇಲ್ಲದೆ ಯಾರ ಚಿತ್ತವು ಸ್ಥಿರವಾಗಿರುತ್ತದೆಯೊ, ನಿಜ ಅರ್ಥದಲ್ಲಿ ಅವನೇ 'ಯೋಗಿ'ಯಾಗಿರುವನು, ಅವನೇ ಗುರುವಾಗಲು ಯೋಗ್ಯನಾಗಿದ್ದಾನೆ. ಅಂತಹವನ ಸೇವೆ ಮಾಡುವುದೇ ಅಗತ್ಯವಾದುದು'.

ಇಂತಹ ಗುರುವು 'ಭಗವಾನ್ ಶಂಭು'ವಲ್ಲದೆ ಮತ್ತಾರಾಗಲು ಸಾಧ್ಯ? ಆದುದರಿಂದ ಅಂತಹ ಗುರುವಿಗೆ ನಮಸ್ಕಾರ ಮಾಡಿ, ಹೀಗೆಂದು ಹೇಳಲಾಗುತ್ತದೆ --

ನಮೋಽಸ್ತು ಗುರವೇ ತುಭ್ಯಂ
ಸಹಜಾನಂದ ರೂಪಿಣೇ
ಯಸ್ಯ ವಾಕ್ಯಾಮೃತಂ ಹಂತಿ
ಸಂಸಾರ ಮೋಹನಾಮಯಂ
(ಅಮನಸ್ಕಯೋಗ, ಉತ್ತರಾರ್ಧ 20)

ಅಂದರೆ, ಸಹಜಾನಂದ ರೂಪಿಯೂ ಗುರುಗಳೂ ಆದ ನಿಮಗೆ ನಮಸ್ಕಾರ. ನಿಮ್ಮ ವಾಕ್ಯರೂಪೀ ಅಮೃತವು ಸಂಸಾರ ಎನ್ನುವ ಮೋಹರೂಪದ ವ್ಯಾಧಿಯನ್ನು ನಾಶ ಮಾಡುತ್ತದೆ. ಇಂತಹ

# ತಿರುಮಲೆಯ ಯಾತ್ರಿಕರಿಗೆ ವಿಶೇಷ ಸೌಲಭ್ಯಗಳು

* ಎಲ್ಲ ವರ್ಗಗಳವರಿಗೂ ಉಚಿತವಾಗಿ ದೊರೆಯುವ ಪರಿಶುದ್ಧ ಸತ್ರಗಳು ಅಥವಾ ಸುಲಭ ದರದಲ್ಲಿ ದೊರೆಯುವ ಬೀಡುಗಳ ವಸತಿ ಸೌಕರ್ಯ.

* ವೆಂಕಟೇಶ್ವರಸ್ವಾಮಿ ದರ್ಶನದ ಯಾತ್ರಿಕರ ಕಾಯುವ ಕೋಣೆಗಳಲ್ಲಿ (ವೈಕುಂಠ) ಗಾಳಿ ದೆಳಕುಗಳ ವ್ಯಾಪಕ ಏರ್ಪಾಡು.

* ಸರತಿಯ ಸಾಲಿನ ಕೋಣೆಗಳಲ್ಲಿ ಅಲ್ಪಾಹಾರ ಸೌಲಭ್ಯ

* ಸುಲಭದರದ ಆಹಾರದ ಪೊಟ್ಟಣಗಳ ಮಾರಾಟ.

* ಸರತಿಯ ಸಾಲಿನ ಕೋಣೆಗಳಿಂದ ಹೊರಹೋಗಬೇಕಾದ ಅಗತ್ಯವಿಲ್ಲದಂತೆ ಶೌಚ ಗೃಹಗಳು.

* ಆಂಧ್ರಪ್ರದೇಶ್ ಹಯನೋತ್ಪಾದನಾವಿತರಣೆ ಇಲಾಖೆಯವರಿಂದ ಶುದ್ಧ ಹಾಲಿನ ಮಾರಾಟ.

* ಯಾತ್ರಿಕರ ವಾಚನಾಭಿರುಚಿಯನ್ನು ಹೆಚ್ಚಿಸುವ ತಿ.ತಿ.ದೇ. ಪ್ರಕಟಣೆಗಳಾದ ಪುಸ್ತಕಗಳು, ದೈವಚಿತ್ರಗಳ ಮಾರಾಟ.

* ಸರತಿಯ ಸಾಲಿನ ಯಾತ್ರಿಕರಿಗೆ ಉಲ್ಲಾಸಕರವಾದ ಟೆಲಿವಿಷನ್‌ಪ್ರದರ್ಶನ, ಭಕ್ತಿ ಸಂಗೀತ.

* ಸರತಿಯ ಸಾಲು ಹಾಗೂ ತಿರುಮಲೆಯ ಕಾಲುಹಾದಿಯ ೭-ನೇ ಮೈಲಿಯ ಬಳಿ ವೈದ್ಯಸೌಲಭ್ಯ ಉಪಹಾರ ಸೌಲಭ್ಯ ಕ್ಯಾಂಟೀನ್.

* ಯಾತ್ರಿಕರ ವಸ್ತುಗಳು, ಪಾದರಕ್ಷೆಗಳ ರಕ್ಷಣೆಗಾಗಿ ಪ್ರತ್ಯೇಕ ಸೌಲಭ್ಯ

* ತಿರುಮಲೆಯ ಸ್ವಾಗತ ಕಚೇರಿಯಿಂದ ವಿವಿಧ ಸ್ಥಳಗಳಿಗೆ ಆಟೋ ಸೌಕರ್ಯ ಹಾಗೂ ಉಚಿತ ಬಸ್ ಸೌಕರ್ಯ.

* ತಿರುಮಲೆಗೆ ನಡೆದು ಹೋಗುವವರ ವಸ್ತುಗಳನ್ನು ಸುರಕ್ಷಿತವಾಗಿ ತಿರುಮಲೆಗೆ ಸೇರಿಸುವ ಅನುಕೂಲ.

* ಯಾತ್ರಿಕರನ್ನು ಪಂಡಾಗಳು, ವಂಚಕರಿಂದ ತಪ್ಪಿಸಲು ಪೇಷ್ಕಾರ್ ಪದವಿಯ ಅಧಿಕಾರಿಯನ್ನು ಮಹಾದ್ವಾರದಲ್ಲಿ ನೇಮಿಸುವಿಕೆ.

* ಸರತಿಯ ಸಾಲಿನ ಕೋಣೆಗಳ ಯಾತ್ರಿಕರ ದೂರುಗಳ ವಿಚಾರಣೆಗಾಗಿ, ಅನುಕೂಲಗಳ ಏರ್ಪಾಡಿಗಾಗಿ ಪೇಷ್ಕಾರ್ ಪದವಿಯ ಮತ್ತೊಂದು ಅಧಿಕಾರಿ ಮತ್ತು ಸಿಬ್ಬಂದಿ.

**ದೇವಸ್ಥಾನದ ಪ್ರಯತ್ನಗಳಲ್ಲಿ ಇವು ಕೆಲವು ಮಾತ್ರವೇ.**

ಗಮನಿಕೆ: ತಿರುಮಲೆಯಲ್ಲಿ ಅಂಚೆ ಕಚೇರಿಯು ರಾತ್ರಿ ೮--೩೦ ಗಂಟೆಯವರೆಗೆ ಕೆಲಸಮಾಡುತ್ತದೆ. ಜೊತೆಗೆ ಪ್ರಧಾನ ಅಂಚೆ ಕಚೇರಿಯು ರಾತ್ರಿ ೧೦-೩೦ ರಿಂದ ೧--೦೦ ಗಂಟೆಯವರೆಗೆ ಕೆಲಸಮಾಡುತ್ತದೆ.

ಸಮರ್ಥರಾದ ಸದ್ಗುರುವಿನ ಅನುಗ್ರಹ ಪಡೆದ ನಂತರ--

ವಿವಿಕ್ತೆ ವಿಜನೆ ದೇಶೇ
ಪವಿತ್ರೇऽತಿ ಮನೋಹರೇ
ಸಮಾಸನೆ ಸುಖಾಸೀನಃ
ಪಶ್ಚಾತ್ತಾ ಕಿಂಚಿತ್ ಸಮಾಶ್ರಯೇತ್

ಸುಖಸ್ಥಾಪಿತ ಸರ್ವಾಂಗಃ
ಸುಸ್ಥಿರಾತ್ಮಾಸುನಿಶ್ಚಯಃ
ಬಾಹು ದಂಡ ಪ್ರಮಾಣೇನ
ಕೃತದೃಷ್ಟಿಃ ಸಮಭ್ಯಸೇತ್
(ಅಮನಸ್ಕಯೋಗ, ಉತ್ತರಾರ್ಧ 50--51)

ಅಂದರೆ ಪವಿತ್ರವಾದುದೂ, ನಿರ್ಜನವಾದುದೂ ಆಗಿರುವ ಮನೋಹರ ಪ್ರದೇಶದಲ್ಲಿ ಸಮ -- ಆಸನದ ಮೇಲೆ ಸ್ವಲ್ಪ ಹಿಂದಕ್ಕೆ ಬಾಗಿ ಸುಖಪೂರ್ವಕವಾಗಿ ಆಸೀನನಾಗಿ ಹಾಗೂ ಸುಖಕರ ರೀತಿಯಲ್ಲಿ ದೇಹದ ಎಲ್ಲ ಅಂಗಗಳನ್ನು ಯಥಾಸ್ಥಾನದಲ್ಲಿ ಸ್ಥಾಪನೆ ಮಾಡಿ, ಸ್ಥಿರಚಿತ್ತ ಹಾಗೂ ನಿಶ್ಚಲತೆಯಿಂದ ಒಂದೇ ಸಮನಾಗಿ ಒಂದು ಕೈದೂರದ ಮುಂದಿನ ಪ್ರದೇಶವನ್ನು ಸ್ಥಿರ ದೃಷ್ಟಿಯನ್ನು ನೆಟ್ಟು, ಹಾಗೆಯೇ ನೋಡುವುದನ್ನು ಅಭ್ಯಾಸ ಮಾಡಬೇಕು. ಇದೇ ರೀತಿಯ ಮಾರ್ಗದರ್ಶನವನ್ನು ಶ್ರೀಮದ್ಭಗವದ್ಗೀತೆ (6/13)ಯಲ್ಲಿ ನೀಡಲಾಗಿದೆ. 'ಸ್ಥಿರಸುಖ ಮಾಸನಂ' ಎಂದು ಕರೆಯುವ ಈ ಆಸನದ ಬಗ್ಗೆ ಪತಂಜಲಿಯೋಗ ಸೂತ್ರ(2/46) ದಲ್ಲಿ ವಿವರಗಳನ್ನು ನೀಡಲಾಗಿದೆ.

ನಿಧಾನ ನಿಧಾನವಾಗಿ ಈ ಆಸನವನ್ನು ಅಭ್ಯಾಸ ಮಾಡಿದಂತೆ, ಇದು ತುಂಬಾ ಸುಲಭವಾದುದಾಗಿ ಭಾಸವಾಗುತ್ತದೆ. ಇದು ವಿನಹ ಬೇರೆ ವಿಧಿಯಾಗಲಿ, ಕ್ರಮವಾಗಲಿ ಇರುವುದಿಲ್ಲ. ಹೀಗೆ ಮಾಡುವಾಗ ಬೇರೆ ಯಾವ ವಿಚಾರದ ಬಗ್ಗೆಯೂ ಯೋಚಿಸಬಾರದು. ಹಾಗೆ ಮಾಡಿ, ಸಾಧನೆಯನ್ನು ಮುಂದುವರಿಸುವುದರಿಂದ ಸ್ವತಃ ತತ್ವವೊಂದು ಹೊಳೆಯುತ್ತದೆ. ಇದೇ ಶಾಂಭವೀ ವಿದ್ಯೆಯ ಅಂತಃ ಸಾಧನೆ.

ನ ಕಿಂಚಿಚ್ಚಿಂತನಾದೇವ
ಸ್ವಯಂ ತತ್ವಂ ಪ್ರಕಾಶತೇ

ಇದನ್ನೇ ಭಗವದ್ಗೀತೆಯಲ್ಲಿಯೂ (6/25)ಈ ರೀತಿಯಲ್ಲಿ ಹೇಳಲಾಗಿದೆ--

ಶನೈಃ ಶನೈರುಪರಮೇದ್
ಬುದ್ಧ್ಯಾ ಧೃತಿ ಗೃಹೀತಯಾ
ಆತ್ಮಸಂಸ್ಥಂ ಮನಃ ಕೃತ್ವಾ
ನ ಕಿಂಚಿದಪಿ ಚಿಂತಯೇತ್

ಅಂದರೆ 'ನಿಧಾನ ನಿಧಾನವಾಗಿ ಅಭ್ಯಾಸ ಮಾಡುತ್ತಾ ಮೇಲ್‌ಸ್ತರವನ್ನು ತಲುಪಿದ ನಂತರ ಧೈರ್ಯಯುಕ್ತ ಬುದ್ಧಿದ್ವಾರಾ ಮನಸ್ಸಿನಲ್ಲಿ ಪರಮಾತ್ಮನನ್ನು ನಿಲ್ಲಿಸಿಕೊಂಡು, ಆತನ ವಿನಹ ಬೇರೆ ಯಾರ ಬಗ್ಗೆಯೂ ಯೋಚಿಸಬೇಡ'.

'ಶಾಂಭವೀ ವಿದ್ಯೆ'ಯನ್ನು ಅಭ್ಯಾಸ ಮಾಡಿದುವವನು 'ಚಿತ್ತ'ವನ್ನು ಹೊರಗಡೆಯಿಂದ ಹಾಗೂ ಒಳಗಡೆಯಿಂದ ನಿಧಾನ ನಿಧಾನವಾಗಿ ಸ್ಥಿರಪಡಿಸಿಕೊಳ್ಳುವ ಪ್ರಕ್ರಿಯೆಯನ್ನು ಕಲಿಯುತೊಡಗುತ್ತಾನೆ. 'ಚಿತ್ತೇ ಚಲತಿ ಸಂಸಾರೋ ನಿಶ್ಚಲೇ ಮೋಕ್ಷ ಪ್ರಜಾಯತೇ' ಅಂದರೆ 'ಚಿತ್ತವು ಚಂಚಲಗೊಂಡಾಗ ಪ್ರಾಪಂಚಿಕ ವಿಷಯಗಳಲ್ಲಿ ವಿಶ್ವಾಸ ಉಂಟಾಗುತ್ತದೆ. ಅದು ನಿಶ್ಚಲಗೊಂಡಾಗ ಮೋಕ್ಷದ ಉದಯವಾಗುತ್ತದೆ' ಎಂದು ಹೇಳಲಾಗುತ್ತದೆ.

'ಮನಸ್ಸಿ'ನ ವಿಷಯದ ಬಗ್ಗೆ ಹೇಳಬೇಕೆಂದರೆ 'ಮನಸ್ಸು ಮನುಷ್ಯನನ್ನು ಬಂಧಿಸುವ ಹಾಗೂ ಮೋಕ್ಷಸಾಧನೆಯ ಹೇತುವಾಗುವ ಒಂದು ಅಂಗವಾಗಿದೆ. ಪ್ರಾಪಂಚಿಕ ವಿಷಯಗಳಲ್ಲಿ ಆಸಕ್ತಗೊಂಡಾಗ ಮನಸ್ಸು ಬಂಧನಕ್ಕೆ ಒಳಗಾಗುತ್ತದೆ. ಅವುಗಳಲ್ಲಿ ನಿರಾಸಕ್ತಗೊಂಡಾಗ ಮನಸ್ಸು ಮುಕ್ತಿ ಪಡೆಯಲು ಕಾರಣವಾಗುತ್ತದೆ'.

ಭಗವದ್ಗೀತೆ (6/5)ಯಲ್ಲಿಯೂ ಹೀಗೆಂದೇ ಹೇಳಲಾಗಿದೆ--

'ಆತ್ಮೈವ ಹ್ಯಾತ್ಮನೋ ಬಂಧು<br>
ರಾತ್ಮೈವ ರಿಪುರಾತ್ಮನಃ'

ಇದೇ ರೀತಿಯಲ್ಲಿ ಶಾಂಭವೀ ವಿದ್ಯೆ ಅಥವಾ 'ಆತ್ಮಮುದ್ರೆ'ಯ ವರ್ಣನೆಯು ಅಮನಸ್ಕಯೋಗ, ಘರೆಂಡ ಸಂಹಿತಾ, ಶಿವಸಂಹಿತಾ, ಗೋರಕ್ಷ ಸಂಹಿತಾ, ಹಠಯೋಗ ಪ್ರದೀಪಿಕಾ ಹಾಗೂ ಅಭಿನಯ ಗುಪ್ತಪಾದಾಚಾರ್ಯರ ಅನೇಕ ಗ್ರಂಥಗಳಲ್ಲಿ ದೊರೆಯುತ್ತವೆ. ಆದರೆ ಹೆಚ್ಚಿನವುಗಳಲ್ಲಿ ಅದರ ವರ್ಣನೆಯು ಒಂದೇ ರೀತಿಯದ್ದಾಗಿದೆ. ಇವುಗಳಲ್ಲಿನ ಕೆಲವೊಂದು ಮುಖ್ಯಶ್ಲೋಕಗಳಲ್ಲಿ 'ಶಾಂಭವೀ ವಿದ್ಯೆ'ಯ ಬಗ್ಗೆ ಸ್ಪಷ್ಟ ಭಾವನೆಯನ್ನು ನೀಡಲಾಗಿದೆ.

ಹಠಯೋಗ ಪ್ರದೀಪಿಕಾ (36)ದಲ್ಲಿ ಹೀಗೆಂದು ಹೇಳಲಾಗಿದೆ--

ಅಂತರ್ಲಕ್ಷ್ಯಂ ಬಹಿರ್ದೃಷ್ಟಿಃ<br>
ನಿಮೇಷೋನ್ಮೇಷವರ್ಜಿತಾ<br>
ಏಷಾ ಸಾ ಶಾಂಭವೀ ಮುದ್ರಾ<br>
ವೇದ ಶಾಸ್ತ್ರೇಷು ಗೋಪಿತಾ

'ಯಾರ ಅಂತರ್ಯದಲ್ಲಿ (ಮನಸ್ಸು ಸ್ಥಿರವಾಗಿರಬೇಕೆನ್ನುವ) ಲಕ್ಷ್ಯವೇ ಗುರಿಯಾಗಿರುತ್ತದೆಯೊ ಹಾಗೂ ರೆಪ್ಪೆಗಳನ್ನು ತೆರೆದಿಟ್ಟುಕೊಂಡೇ, ಅವನ್ನು ಮುಚ್ಚದ ಸ್ಥಿರ ಚಕ್ಷುಗಳನ್ನು ಹೊಂದಿ, ನಿಮೇಷೋನ್ಮೇಷದಿಂದ ಬಾಹ್ಯ ದೃಷ್ಟಿಯನ್ನು ಹೊಂದಿದ್ದರೆ, ಅದೇ ಶಾಂಭವೀ ಮುದ್ರೆಯಾಗಿರುತ್ತದೆ. ಇದು ವೇದಾದಿ ಶಾಸ್ತ್ರಗಳಲ್ಲಿ ಗುಪ್ತರೂಪದಲ್ಲಿ ಸುರಕ್ಷಿತವಾಗಿದೆ'.

ಅಂತರ್ಲಕ್ಷ್ಯ ವಿಲೀನ ಚಿತ್ತಪವನೋ<br>
ಯೋಗೀ ಯದಾ ವರ್ತತೇ<br>
ದೃಷ್ಟ್ಯಾ ನಿಶ್ಚಲತಾರಯಾ ಬಹಿ--<br>
ರಧಃ ಪಶ್ಯನ್ನ ಪಶ್ಯನ್ನಪಿ<br>
ಮುದ್ರೇಯಂ ಖಲು ಶಾಂಭವೀ ಭವತಿಃ<br>
ಸಾ ಲಬ್ಧಾ ಪ್ರಸಾದಾತ್ ಗುರೋಃ<br>
ಶೂನ್ಯಾ ಶೂನ್ಯಾ ವಿಲಕ್ಷಣಂ ಸ್ಫುರತಿ<br>
ತತ್ತತ್ತ್ವಪದಂ ಶಾಂಭವಮ್<br>
(ಹಠಯೋಗಪ್ರದೀಪಿಕಾ 4/37)

ಈ ಶ್ಲೋಕದ ಭಾವವು ಈ ರೀತಿ ಇದೆ--

'ಯೋಗಿಯು ಬಾಹ್ಯ ಮನೋವೃತ್ತಿಗಳು ವಿಲೀನಗೊಂಡು, ಹೃದಯದ ಅಂತರ್ಯದಲ್ಲಿ ನೆಲೆಸಿರುವ ಪರಮಾತ್ಮನಲ್ಲಿ ಒಂದಾಗಬೇಕು ಹಾಗೂ ಕಣ್ಣುಗಳ ನೋಟವು ಸ್ಥಿರವಾಗಿ ಬಾಹ್ಯ ಜಗತ್ತನ್ನು ನೋಡುತ್ತಿದ್ದರೂ ಅದರ ಮೇಲೆ ಗಮನವಿಡದೆ, ಅಲ್ಲಿಯೂ ಕೂಡ ಪರಮಾತ್ಮನನ್ನು ಕಾಣುತ್ತಿರಬೇಕು. ಈ ಶಾಂಭವೀ ವಿದ್ಯೆಯು ಅಥವಾ ಮನಮುದ್ರೆಯು ಸದ್ಗುರುವಿನ (ಪರಮಗುರು ಶಿವ) ಪರಮ ಪ್ರಸಾದದಿಂದಲೇ ಸಾಧ್ಯವಾಗುತ್ತದೆ. ಶೂನ್ಯಾಶೂನ್ಯದ ಎಲ್ಲೆಯನ್ನೂ ಮೀರಿರುವ ಈ ಪರಮ ಶಾಂಭವೀ ತತ್ವವು ವಿಲಕ್ಷಣವಾದುದೂ, ಅಪೂರ್ವವಾದುದೂ ಆಗಿದೆ. ಈ ತತ್ವ ಮುದ್ರೆಯು ಪ್ರಾಪ್ತಿ ಸಿದ್ಧಿಯಾದ ನಂತರವೇ ಸ್ಫುರಿತಗೊಳ್ಳುತ್ತದೆ. ಇದೇ ಶಿವ ಸಾಕ್ಷಾತ್ಕಾರ ಅಥವಾ ಪರಮಾತ್ಮ ಪ್ರಾಪ್ತಿ ಎಂದು ತಿಳಿಯಬೇಕು.

ಶಾಂಭವೀ ವಿದ್ಯೆ ಅಥವಾ ತತ್ವಮುದ್ರೆಯನ್ನು ಅರಿತವನು ಸ್ವತಃ ಬ್ರಹ್ಮಸ್ವರೂಪ (ಶಿವ ಸ್ವರೂಪ)ನೇ ಆಗಿಬಿಡುವನು ಎಂದು ಘೇರಂಡ ಸಂಹಿತೆ (6/62)ಯೂ ಕೂಡ ತಿಳಿಸುತ್ತದೆ.

ಶಾಂಭವೀಂ ಯೋ ವಿಜಾನಾತಿ<br>
ಸ ಚ ಬ್ರಹ್ಮ ನ ಚಾ ನ್ಯಥಾ

ಇಂದಿನ ಕಲುಷಿತ ಹಾಗೂ ಮಾಲಿನ್ಯಮಯ ಪ್ರಪಂಚಕ್ಕೆ ಶಾಂಭವೀ ವಿದ್ಯೆ ಅತ್ಯಂತ ಉಪಯುಕ್ತವಾದುದು. ತಮ್ಮ ತಮ್ಮ ಮನೆಗಳಲ್ಲಿ, ಸಾಂಸಾರಿಕ ತಾಪತ್ರಯಗಳನ್ನು ಎದುರಿಸಿಕೊಂಡೇ ಈ ಮುದ್ರೆಯನ್ನು ಸಾಧನೆ ಮಾಡಬಹುದು. ಇದರಿಂದ ಮಾನಸಿಕ ಶಾಂತಿಯೂ ದೊರೆಯುವುದು, ಪರಮಾತ್ಮನ ಸಾನ್ನಿಧ್ಯದ ಪ್ರಾಪ್ತಿಯೂ ಆಗುವುದು. ಇದರ ಸಾಧನೆಗೆ ಗಂಡು ಹೆಣ್ಣಿನ ಭೇದವಿಲ್ಲ; ವಯಸ್ಸಿನ ಅಂತರದ ತೊಂದರೆಯೂ ಇಲ್ಲ. ಇದರ ಸಾಧನೆಯಿಂದ ಹಿಂದಿನ ಅನೇಕ ಮಹನೀಯರು, ಸಂತ-ಭಕ್ತರು ಪರಮಾತ್ಮನ ಸಾಕ್ಷಾತ್ಕಾರವನ್ನು ಪಡೆದಿದ್ದಾರೆ. ಶ್ರೀರಾಮಕೃಷ್ಣ ಪರಮಹಂಸರು ಈ ವಿದ್ಯೆಯ ಸಾಧನೆಯಿಂದಲೇ ಕಾಳೀಮಾತೆಯ ದರ್ಶನ ಪಡೆದರು. ಮಹಾತ್ಮಾಗಾಂಧಿಯವರಿಗೂ ತುಂಬಾ ಇಷ್ಟವಾದ ವಿದ್ಯೆಯಾಗಿತ್ತು ಇದು. ಎಲ್ಲ ಭಾರತೀಯರೂ ಈ ಸುಗಮ ಸಾಧನೆಯನ್ನು ಅನುಸರಿಸುವುದು ಅತ್ಯಂತ ಸೂಕ್ತ. (ಆಧಾರಗಳಿಂದ)



(14 ನೇ ಪುಟದಿಂದ)

ದರ್ಶನ, ಸೂಚನೆ, ಪ್ರೇರಣೆ, ಅನುಗ್ರಹ ನೀಡುತ್ತಾ ಜನರ ಕಷ್ಟಕಾರ್ಪಣ್ಯಗಳನ್ನು ಜಾತಿ ಮತ ಭೇದವಿಲ್ಲದೆ ಪರಿಹಾರ ಮಾಡುತ್ತಾ ಭಕ್ತರ ಕರೆಗೆ ಓಗೊಡುತ್ತಾ ಅಭಯಹಸ್ತ ನೀಡಿ ವೃಂದಾವನದಲ್ಲಿ ನಿಂತಿದ್ದಾರೆ. ಮಾತ್ರವಲ್ಲದೆ ಆರ್ತರ ಉದ್ಧಾರಕ್ಕಾಗಿ ಕರೆದಲ್ಲಿಗೆ ಬರುತ್ತಾರೆ. ೮೦೦ಕ್ಕೂ ಮಿಕ್ಕಿ ಇವರ ಮೃತ್ತಿಕಾ ವೃಂದಾವನಗಳು ಭಾರತದ ವಿವಿಧೆಡೆಗಳಲ್ಲಿವೆ. ಈ ಹಿಂದೆ ತಿಳಿಸಿದಂತೆ ರಾಘವೇಂದ್ರರು ಮುಖ್ಯವಾಗಿ ೩ ಜನ್ಮಗಳಲ್ಲಿ -- ೧) ಪ್ರಹ್ಲಾದ, ೨) ವ್ಯಾಸರಾಜ, ೩) ಗುರುರಾಯರಾಗಿ ಅಪಾರ ಪುಣ್ಯ ಸಂಚಯನ ಮಾಡಿದ್ದಾರೆ. ಈ ಪುಣ್ಯದ ಕೊಡ ಈಗ ಹಿಗ್ಗಿ ದೊಡ್ಡ ಕೊಪ್ಪರಿಗೆಯಾಗಿದೆ. ಅದನ್ನು ಆಶ್ರಿತ ಭಕ್ತರಿಗೆ ಹಂಚುತ್ತಾರೆ. ಗುರುಗಳ ವೃಂದಾವನ ಪ್ರವೇಶಾನಂತರ ಮಂಚಾಲೆ ಗ್ರಾಮ, ಮಂತ್ರಾಲಯ ಕ್ಷೇತ್ರವಾಗಿ ದೊಡ್ಡ ಆಧ್ಯಾತ್ಮ ಹಾಗೂ ಅನುಗ್ರಹ ಕೇಂದ್ರವಾಗಿ ಬೆಳಗುತ್ತಿದೆ. ರಾಯರ ಕೃಪಾಜಲ ದೇಶ ವಿದೇಶಗಳಿಗೆ ಅವರ ಆಶ್ರಿತರು ಕರೆದಲ್ಲಿಗೆ ಹರಿಯುತ್ತಿದೆ. ಏಕೆಂದರೆ ಗುರುರಾಯರು ಭಜಕರ ಪಾಲಿಗೆ ಕಲ್ಪತರು. ನಮಿಸಿದರವರ ಪಾಲಿಗೆ ಅವರ ಇಷ್ಟಾರ್ಥಗಳನ್ನು ಪೂರೈಸುವ ಕಾಮಧೇನು.

**---ಎಸ್. ಕೆ. ಆಚಾರ್.**

ಅತ್ತಿಮರ ತಾ ಕಾಯ
ಹೊತ್ತಿರ್ದ ತೆರನಂತೆ
ತತ್ವಭೇದಗಳನರಿಯದಲೆ
ರುದ್ರಾಕ್ಷಿ ಹೊತ್ತು ಫಲವೇನು?

ಎಂಬುದು ಸರ್ವಜ್ಞನ ಮಾತು. ರುದ್ರಾಕ್ಷಿ ಮಾಲೆಯನ್ನು ಧರಿಸಿದವನು ತತ್ವಭೇದ ಅರ್ಥಾತ್ ಅದರ ಪ್ರಯೋಜನ ವೇನೆಂಬುದನ್ನು ಅರಿಯದೇ ಕೆಂಬುದು ಆತನ ಮಾತಿನ ಇಂಗಿತ. ಇಂದಿನ ನವ ನಾಗರಿಕ ಯುಗದ ಕೆಲವು ಯುವಕರು ಮೋಜಿಗಾಗಿ ರುದ್ರಾಕ್ಷಿ ಧರಿಸುತ್ತಿರುವುದು ಅಲ್ಲಲ್ಲಿ ಕಂಡುಬರುತ್ತಿದೆ. ಅಧ್ಯಾತ್ಮ ಸಾಧಕರು ಅಧ್ಯಾತ್ಮಸಾಧನೆಗಾಗಿ ರುದ್ರಾಕ್ಷಿಯನ್ನು ಧರಿಸುವುದು ಸರ್ವವಿದಿತ. ಆದರೆ ರುದ್ರಾಕ್ಷಿಧಾರಣೆ ಅಷ್ಟಕ್ಕೇ ಸೀಮಿತವಲ್ಲ. ಇದರ ಧಾರಣೆ, ಆರೋಗ್ಯ ರಕ್ಷಣೆ ಹಾಗೂ ಮನಃಶಾಂತಿ -- ಎರಡನ್ನೂ ಏಕಕಾಲದಲ್ಲಿ ಗಳಿಸಿಕೊಡುತ್ತದೆ.

ನಮ್ಮ ಭಾರತೀಯ ವಾಙ್ಮಯದಲ್ಲಿ ಯಾವುದಕ್ಕೆ ತಾನೆ ಕೊರತೆಯಿದೆ? ರುದ್ರಾಕ್ಷಿಗೇ ಸಂಬಂಧಿಸಿದ ಉಪನಿಷತ್ತೊಂದಿದೆ. ಅದರ ಹೆಸರು "ರುದ್ರಾಕ್ಷ ಜಾಬಾಲೋಪನಿಷತ್". ರುದ್ರಾಕ್ಷಿಯ ಮಹಿಮೆಯನ್ನು ಶ್ರುತಿಸ್ಮೃತಿ ಪುರಾಣಗಳು ಬಾಯ್ತುಂಬ ಹೊಗಳಿವೆ. ದೇಹದ ಯಾವಯಾವ ಭಾಗದಲ್ಲಿ ಎಷ್ಟೆಷ್ಟು ರುದ್ರಾಕ್ಷಿಯನ್ನು ತೊಡಬೇಕೆಂಬುದನ್ನು ಪೂರ್ವೋಕ್ತ ಉಪನಿಷತ್ತು ಹೀಗೆ ಸ್ಪಷ್ಟಪಡಿಸಿದೆ.

ಶಿಖಾಯಾಮೇಕ ರುದ್ರಾಕ್ಷಂ
ತ್ರಿಶತಂ ಶಿರಸಾವಹೇತ್
ಷಟ್‌ತ್ರಿಂಶತಂ ಗಲೇ ದಧ್ಯಾತ್
ಬಾಹೋಃ ಷೋಡಶ ಷೋಡಶ
ಮಣಿಬಂಧೇ ದ್ವಾದಶೈವ
ಸ್ಕಂಧೇ ಪಂಚಶತಂ ವಹೇತ್
ಅಷ್ಟೋತ್ತರ ಶತೈರ್ಮಾಲಾ
ಮುಪವೀತಂ ಪ್ರಕಲ್ಪಯೇತ್

ಅಂದರೆ ಜುಟ್ಟಿನ ಮೇಲೆ ಒಂದು ರುದ್ರಾಕ್ಷಿ, ತಲೆಯು ಮೇಲೆ ಮೂವತ್ತಮೂರು, ಕತ್ತಿನಲ್ಲಿ ಮೂವತ್ತಾರು, ಒಂದೊಂದೂ ಕಿವಿಯಲ್ಲಿ ಆರಾರು, ಕೈಯಲ್ಲಿ ಹನ್ನೆರಡು, ಹೆಗಲಿನಲ್ಲಿ ನೂರ ಐದು, ನೂರೆಂಟು ಇರುವ ಮಾಲೆ -- ಹೀಗೆ ರುದ್ರಾಕ್ಷಿಯನ್ನು ಕ್ರಮವಾಗಿ ಧರಿಸಿದವನು ಸಾಕ್ಷಾತ್ ಪರಶಿವನಾಗುತ್ತಾನೆ. ಅರ್ಥಾತ್ ಮಹಿಮಾನ್ವಿತನಾಗುತ್ತಾನೆ.

ರುದ್ರಾಕ್ಷಿಯಲ್ಲಿ ಹಲವು ವಿಧಗಳಿವೆ. ಒಂದೊಂದು ರುದ್ರಾಕ್ಷಿಯಲ್ಲಿ ಒಂದೊಂದು ಅದ್ಭುತಗುಣವಿದೆ.

# ರುದ್ರಾಕ್ಷಿ ಧಾರಣೆ

---ಯೋಗಾಚಾರ್ಯ ಕೆ. ಕೇಶವಮೂರ್ತಿ.



ಒಂದರಿಂದ ಹಿಡಿದು ಹದಿನಾಲ್ಕು ಮುಖಗಳಿರುವ ರುದ್ರಾಕ್ಷಿಗಳಿವೆ.

## ೧. ಏಕವಕ್ತ್ರ ರುದ್ರಾಕ್ಷಿ :--

ಒಂದೇ ಮುಖವಿರುವ ರುದ್ರಾಕ್ಷಿ ಇದು.

ಏಕವಕ್ತ್ರಂ ತು ರುದ್ರಾಕ್ಷಂ
ಪರತತ್ವ ಸ್ವರೂಪಕಮ್
ತದ್ಧಾರಣಾತ್ಪರೇ ತತ್ವೇ
ಲೀಯತೇ ವಿಜಿತೇಂದ್ರಿಯಃ (ರು.ಜಾ -- ೧)

ಈ ರುದ್ರಾಕ್ಷಿ ಸಿಗುವುದು ತುಂಬಾ ಅಪರೂಪ. ಇದು ಸಾಕ್ಷಾತ್ ಶಿವನ ಪ್ರತೀಕವೆಂದೇ ಹೇಳುತ್ತಾರೆ. ಶಿವನು ರುದ್ರಾಕ್ಷಿಮಾಲಾಧರ. ಶಿವನ ಅಲಂಕಾರ ವಸ್ತುಗಳಲ್ಲಿ ಅತ್ಯಂತ ಪ್ರಿಯವಾದುದು ರುದ್ರಾಕ್ಷಿಯೊಂದೇ.

ಧಾರಣಫಲ :-- ಸರ್ವಪ್ರಯತ್ನೇನ, ಶುಚಿರ್ಭೂತನಾದವನು ಈ ರುದ್ರಾಕ್ಷಿಯನ್ನು ಧರಿಸಿದ್ದೇ ಆದರೆ ಆತನಿಗೆ ಯಾವ ಕೊರತೆಯೂ ಇರುವುದಿಲ್ಲ. ಸಮಸ್ತ ಸಂಪದಗಳೂ ಅವನಿಗೆ ಲಭಿಸುವುದರ ಜೊತೆಗೆ ಜ್ಞಾನವೃದ್ಧಿಯಾಗಿ ವ್ಯಕ್ತಿತ್ವ ವಿಕಾಸವಾಗುತ್ತದೆ. ಇದನ್ನು ಧರಿಸಿದರೆ ಅನೇಕ ಪಾಪಗಳು ಪರಿಹಾರವಾಗುತ್ತದೆಂದು ದೇವೀಭಾಗವತದಲ್ಲಿ ಹೇಳಿದೆ. ಪಾಪಪರಿಹಾರವಾದೊಡನೆಯೇ ರೋಗವೂ ಪರಿಹಾರವಾಗುತ್ತದೆ. ಕಾರಣ,

"ಪೂರ್ವಜನ್ಮಕೃತಂ ಪಾಪಂ
ರೋಗ ರೂಪೇಣ ಬಾಧತೇ"

ಅಂದರೆ ಪೂರ್ವಜನ್ಮದಲ್ಲಿ ಮಾಡಿದ ಪಾಪದ ಫಲವಾಗಿಯೇ ನಮಗೆ ರೋಗಗಳು ಬರುತ್ತವೆ.

ಈ ರುದ್ರಾಕ್ಷಿಯ ಮತ್ತೊಂದು ಮಹಿಮೆಯೆಂದರೆ ಇದನ್ನು ಹಸಿ ಹಾಲಿನಲ್ಲಿ ಹಾಕಿ ಒಂದು ದಿನದನಂತರ ಹಾಲನ್ನು ಕಾಯಿಸಿದರೂ ಸಹ ಹಾಲು ಒಡೆಯುವುದಿಲ್ಲ ಎನ್ನುತ್ತಾರೆ.

ಗುರುತಿಸುವ ಬಗೆ :-- ಈ ರುದ್ರಾಕ್ಷಿಯ ಮೇಲೆ ಓಂಕಾರ, ತ್ರಿಶೂಲ, ಲಿಂಗ ಎಂಬ ಮೂರು ಗುರುತುಗಳಿರುತ್ತವೆ.

## ೨. ದ್ವಿವಕ್ತ್ರ ರುದ್ರಾಕ್ಷಿ :--

ಈ ರುದ್ರಾಕ್ಷಿಗೆ ಎರಡು ಮುಖಗಳಿರುತ್ತದೆ. ಇದು ಅರ್ಧನಾರೀಶ್ವರ ತತ್ವದ ಸಂಕೇತ. ಇದನ್ನು ಮುನಿಗಳು ಧರಿಸುವರು. ರುದ್ರಾಕ್ಷ ಜಾಬಾಲೋಪನಿಷತ್ತಿನಲ್ಲಿ (ರು. ಜಾ.) ಹೀಗೆ ಹೇಳಿದೆ.

ದ್ವಿವಕ್ತ್ರಂ ತು ಮುನಿಶ್ರೇಷ್ಠ
ಚಾ ರ್ಧನಾರೀಶ್ವರಾತ್ಮಕಮ್
ಧಾರಣಾದರ್ಧನಾರೀಶಃ
ಪ್ರೀಯತೇ ತಸ್ಯ ನಿತ್ಯಶಃ (ರು.ಜಾ.೨)

ಧಾರಣಫಲ :-- ೧) ಇಂದ್ರಿಯಜಯವಾಗುತ್ತದೆ. ೨) ಪಾಪಗಳು ನಶಿಸುತ್ತವೆ. ೩) ಮನಃಶಾಂತಿ ದೊರೆಯುತ್ತದೆ. ೪) ಕುಂಡಲಿನೀ ಶಕ್ತಿ ಉದ್ಬೋಧಗೊಳ್ಳುತ್ತದೆ.

## ೩. ತ್ರಿಮುಖ ರುದ್ರಾಕ್ಷಿ :--

ಹೆಸರೇ ಸೂಚಿಸುವಂತೆ ಇದಕ್ಕೆ ಮೂರು ಮುಖಗಳು.

ತ್ರಿಮುಖಂ ಚೈವ ರುದ್ರಾಕ್ಷಂ
ಅಗ್ನಿತ್ರಯಸ್ವರೂಪಕಮ್.
ತದ್ಧಾರಣಾಚ್ಚ ಹುತಭುಕ್ತಸ್ಯ
ತುಷ್ಯತಿ ನಿತ್ಯದಾ (ರು.ಜಾ.೩)

ಈ ರುದ್ರಾಕ್ಷಿಯು ಮೂರು ಅಗ್ನಿಗಳ ಸ್ವರೂಪ.

ಧಾರಣಫಲ :-- ೧) ಇದನ್ನು ಧರಿಸಿದವನು ನಿತ್ಯ ಸಂತೋಷಿಯಾಗಿರುತ್ತಾನೆ. ೨) ತಿಳಿಯದೆ ಮಾಡಿದ ಸ್ತ್ರೀಹತ್ಯಾದೋಷ ನಿವಾರಣೆಯಾಗುತ್ತದೆ. ೩) ವ್ಯಕ್ತಿಯ ಸರ್ವತೋಮುಖ ಏಳಿಗೆಯಾಗುತ್ತದೆ. ೪) ಆರೋಗ್ಯವಂತನಾಗುತ್ತಾನೆ.

## ೪. ಚತುರ್ಮುಖ ರುದ್ರಾಕ್ಷಿ :--

ಇದು ನಾಲ್ಕು ಮುಖಗಳಿರುವ ರುದ್ರಾಕ್ಷಿ.

ಚತುರ್ಮುಖಂ ಚ ರುದ್ರಾಕ್ಷಂ
ಚತುರ್ವಕ್ತ್ರ ಸ್ವರೂಪಕಮ್
ತದ್ಧಾರಣೇಚ್ಚತುರ್ವಕ್ತ್ರಃ
ಪ್ರೀಯತೇ ತಸ್ಯ ನಿತ್ಯದಾ

ಇದು ಚತುರ್ಮುಖ ಬ್ರಹ್ಮಸ್ವರೂಪ. ಅಜ್ಞಾನದಿಂದ ಮಾಡಿದ ನರಹತ್ಯಾದೋಷವನ್ನು ಇದರ ಧಾರಣೆ ನೀಗುತ್ತದೆ. ಆತ ನಿತ್ಯವೂ ಹರ್ಷದಿಂದಿರುತ್ತಾನೆ. ಹರ್ಷದಿಂದಿರಬೇಕಾದರೆ ಆರೋಗ್ಯಶಾಲಿಯಾಗಿರಬೇಕೆಂದು ಹೇಳಬೇಕಾಗಿಯೇ ಇಲ್ಲ.

ಧಾರಣಫಲ :-- ೧) ಇದನ್ನು ಧರಿಸುವುದರಿಂದ ಗ್ರಹಣಶಕ್ತಿ ಹೆಚ್ಚುತ್ತದೆ. ಆದಕಾರಣ ವಿದ್ಯಾರ್ಥಿಗಳಿಗೆ ಇದು ಹೆಚ್ಚು ಉಪಯುಕ್ತ. ೨) ಇದನ್ನು ಹಾಲಿನಲ್ಲಿ ಹಾಕಿ ಬಿಸಿಮಾಡಿ ಕುಡಿದರೆ ಮಾನಸಿಕ ರೋಗಗಳು ನಿವಾರಣೆಯಾಗುತ್ತದೆ.

## ೫. ಪಂಚವಕ್ತ್ರ ರುದ್ರಾಕ್ಷಿ :--

ವಕ್ತ್ರ ಎಂದರೆ ಮುಖ. ಈ ರುದ್ರಾಕ್ಷಿಗೆ ಐದು ಮುಖಗಳು. ಒಂದೊಂದು ಮುಖವೂ ಶಿವನ ಒಂದೊಂದು ಮುಖಕ್ಕೆ ಪ್ರತೀಕ.

ಪಂಚವಕ್ತ್ರಂ ತು ರುದ್ರಾಕ್ಷಂ
ಪಂಚಬ್ರಹ್ಮಸ್ವರೂಪಕಮ್
ಪಂಚವಕ್ತ್ರಃ ಸ್ವಯಂಬ್ರಹ್ಮ
ಪುಂಹತ್ಯಾಂ ಚ ವ್ಯಪೋಹತಿ (ರು.ಜಾ.--೫)

ಸದ್ಯೋಜಾತ, ವಾಮದೇವ, ಅಘೋರ, ಈಶಾನ ಮತ್ತು ತತ್ಪುರುಷ -- ಇವು ಶಿವನ ಪಂಚ ಮುಖಗಳು. ಆದಕಾರಣ ಇದು ಶಿವಕಲಾಸ್ವರೂಪ ಎಂದು ಹೇಳಲಾಗಿದೆ.

ಧಾರಣಫಲ :-- ೧) ಕಾಮವಿಕಾರಗಳು ತೊಲಗುತ್ತವೆ. ಅತಿ ಭೋಗ ಆರೋಗ್ಯಕ್ಕೆ ಹಾನಿ, ಅಂತಹ ಹಾನಿಯಿಂದ ನಮ್ಮನ್ನು ರಕ್ಷಿಸುತ್ತದೆ. ೨) ಎದೆನೋವನ್ನು ನಿವಾರಿಸುತ್ತದೆ. ೩) ಶತ್ರುಗಳು ಮಿತ್ರರಾಗುತ್ತಾರೆ. ೪) ಮನಃಶಾಂತಿಯನ್ನು ನೀಡುತ್ತದೆ.

## ೬. ಷಡ್ವಕ್ತ್ರ ರುದ್ರಾಕ್ಷಿ :--

ಆರು ಮುಖಗಳಿಂದ ಕೂಡಿದ ರುದ್ರಾಕ್ಷಿಯಿದು.

ಷಡ್ವಕ್ತ್ರಮಪಿ ರುದ್ರಾಕ್ಷಂ
ಕಾರ್ತಿಕೇಯಾಧಿ ದೈವತಮ್
ತದ್ಧಾರಣಾನ್ ಮಹಾಶ್ರೀಃ
ಸ್ಯಾನ್ಮಹದಾರೋಗ್ಯಮುತ್ತಮಮ್ (ರು.ಜಾ. ೬)

ಆರುಮುಖಗಳುಳ್ಳ ಕುಮಾರಸ್ವಾಮಿಗೆ ಇದು ಸಂಕೇತ.

ಧಾರಣಫಲ :-- ೧) ಮಹತ್ತರವಾದ ಐಶ್ವರ್ಯವು ಲಭ್ಯವಾಗುತ್ತದೆ. ೨) ಉತ್ತಮ ಆರೋಗ್ಯವನ್ನು ನೀಡುತ್ತದೆ. ೩) ಸಕಲ ಪಾಪಗಳನ್ನೂ ಪರಿಹರಿಸುತ್ತದೆ. ೪) ರಕ್ತದ ಒತ್ತಡ ಮತ್ತು ಹಿಸ್ಟೀರಿಯಾಗಳ ಮೇಲೆ ಪ್ರಭಾವ ಬೀರುತ್ತದೆ.

೫) ಆಧ್ಯಾತ್ಮಿಕ ಸಂಪತ್ತು ಲಭಿಸುತ್ತದೆ.

---

## ೭. ಸಪ್ತವಕ್ತ್ರ ರುದ್ರಾಕ್ಷಿ :--

ಈ ರುದ್ರಾಕ್ಷಿಗೆ ಏಳು ಮುಖಗಳು.

ಸಪ್ತವಕ್ತ್ರಂ ತು ರುದ್ರಾಕ್ಷಂ
ಸಪ್ತಮಾಲಾಧಿ ದೈವತಮ್
ತದ್ಧಾರಣಾನ್ಮಹಾಶ್ರೀಃ
ಸ್ಯಾನ್ಮಹದಾರೋಗ್ಯ ಮುತ್ತಮಮ್

ಇದು ಮನ್ಮಥನ ರೂಪ.

ಧಾರಣಫಲ :-- ೧) ಅಷ್ಟೈಶ್ವರ್ಯಗಳೂ ಲಭಿಸುತ್ತದೆ. ೨) ಮಹತ್ತರವಾದ ಆರೋಗ್ಯವುಂಟಾಗುತ್ತದೆ. ೩) ಪಂಚಮಹಾ ಪಾತಕಗಳಲ್ಲಿ ಒಂದಾದ ಕಳ್ಳತನ ದೋಷವನ್ನು ನಿವಾರಿಸುತ್ತದೆ. ಅಕಾಲಮರಣದಿಂದ ಪಾರಾಗಬಹುದು.

## ೮. ಅಷ್ಟವಕ್ತ್ರ ರುದ್ರಾಕ್ಷಿ :--

"ಅಷ್ಟವಕ್ತ್ರಂ ತು ರುದ್ರಾಕ್ಷಂ
ಅಷ್ಟಮಾತ್ರಾಧಿದೈವತಮ್"

ಎಂಬ ಉಕ್ತಿಯಂತೆ ಇದು ಗಣಪತಿಯ ಪ್ರತೀಕ.

ಧಾರಣಫಲ :-- ೧) 'ಮಹತೀ ಜ್ಞಾನಸಂಪತ್ತಿಃ ಶುಚಿರ್ಧಾರಣತಃ ಸದಾ' ಅಂದರೆ ಯಾರು ಶುಚಿರ್ಭೂತರಾಗಿ ಇದನ್ನು ಧರಿಸುತ್ತಾರೋ ಅಂತಹವರು ಮಹತ್ತರವಾದ ಜ್ಞಾನ ಅಂದರೆ ಬ್ರಹ್ಮಜ್ಞಾನವನ್ನು ಪಡೆಯುತ್ತಾರೆ. ೨) ಇದನ್ನು ಧರಿಸಿದ ವ್ಯಕ್ತಿಗೆ ಅನ್ನ, ವಸ್ತ್ರ ಹಾಗೂ ಐಶ್ವರ್ಯದ ಕೊರತೆ ಬರುವುದಿಲ್ಲ. ೩) ಇದರಿಂದ ಕುಂಡಲಿನೀ ಶಕ್ತಿ ಉದ್ಬೋಧನೆಯಾಗುತ್ತದೆ.

## ೯. ನವವಕ್ತ್ರ ರುದ್ರಾಕ್ಷಿ :--

ಈ ರುದ್ರಾಕ್ಷಿಗೆ ಒಂಬತ್ತು ಮುಖಗಳು.

ನವವಕ್ತ್ರಂ ತು ರುದ್ರಾಕ್ಷಂ
ನವಶಕ್ತ್ಯಧಿದೈವತಮ್
ತಸ್ಯ ಧಾರಣ ಮಾತ್ರೇಣ
ಪ್ರೀಯಂತೇ ನವಶಕ್ತಯಃ (ರು.ಜಾ.೧೧)

ಇದು ಭೈರವನ ಪ್ರತೀಕ. ಇದರಲ್ಲಿ ಒಂಬತ್ತು ದೇವತಾಶಕ್ತಿಗಳು ಅಡಕವಾಗಿವೆ. ದುರ್ಗಿಯ ಆರಾಧಕರು ಇದನ್ನು ವಿಶೇಷವಾಗಿ ಧರಿಸುತ್ತಾರೆ.

ಧಾರಣಫಲ:--೧) ಇದರ ಧಾರಣೆಯಿಂದ ನವಚೈತನ್ಯವುಂಟಾಗುತ್ತದೆ. ೨) ಎದೆನೋವನ್ನು ನಿವಾರಿಸುತ್ತದೆ.

## ೧೦. ದಶವಕ್ತ್ರ ರುದ್ರಾಕ್ಷಿ :--

ಇದು ಹತ್ತು ಮುಖಗಳಿಂದ ಕೂಡಿದ ರುದ್ರಾಕ್ಷಿ.

ದಶವಕ್ತ್ರಂ ತು ರುದ್ರಾಕ್ಷಂ
ಯಮದೈವತ್ಯ ಮೀರಿತಮ್
ದಶಾ ಪ್ರಶಾಂತಿ ಜನಕಂ
ಧಾರಣಾನ್ನಾತ್ರ ಸಂಶಯಃ (ರು.ಜಾ.೧೨)

ಇದು ಮಹಾವಿಷ್ಣುವಿನ ಸ್ವರೂಪ. ಸುಲಭವಾಗಿ ದೊರೆಯುತ್ತದೆ.

ಧಾರಣಫಲ :-- ೧) ಇದರ ಧಾರಣೆ ಮನಃಶಾಂತಿಯನ್ನು ನೀಡುತ್ತದೆ. ಇದರಲ್ಲಿ ಯಾವುದೇ ಸಂಶಯಕ್ಕೆಡೆಯಿಲ್ಲ. ೨) ಗ್ರಹಬಾಧೆ ಹಾಗೂ ಭೂತಪ್ರೇತಗಳ ಬಾಧೆಯಿಂದ ಮುಕ್ತರಾಗಬಹುದು.

## ೧೧. ಏಕಾದಶಮುಖ ರುದ್ರಾಕ್ಷಿ :--

ಈ ರುದ್ರಾಕ್ಷಿಗೆ ಹನ್ನೊಂದು ಮುಖ. ಇದು ಏಕಾದಶರುದ್ರರ ಪ್ರತೀಕ. ವೀರಭದ್ರ, ಶಂಭು, ಗಿರೀಶ, ಅಜೈಕಪಾದ, ಅಹಿರ್ಬುಧ್ನ್ಯ, ಪಿನಾಕಿ, ಪಶುಪತಿ, ಭವ, ಉಗ್ರ, ತ್ರಿಪ್ಟಿತಿ ಮತ್ತು ಶಂಕರ -- ಇವರೇ ಏಕಾದಶ ರುದ್ರರು. ಈ ರುದ್ರಾಕ್ಷಿಯನ್ನು ಸ್ತ್ರೀಯರು ವಿಶೇಷವಾಗಿ ಧರಿಸುತ್ತಾರೆ.

ಏಕಾದಶಮುಖಂ ತ್ವಕ್ಷಂ
ರುದ್ರೈಕಾದಶದೈವತಮ್
ತದಿದಂ ದೈವತಂ ಪ್ರಾಹುಃ
ಸದಾ ಸೌಭಾಗ್ಯವರ್ಧನಮ್ (ರು.ಜಾ.೧೩)

ಧಾರಣಫಲ :-- ೧) ಈ ರುದ್ರಾಕ್ಷಿ ಎಲ್ಲಿ ಇರುತ್ತದೋ ಅಲ್ಲಿ ಸೌಭಾಗ್ಯವುವರ್ಧಿಸುತ್ತದೆ. ೨) ಇದರ ಧಾರಣೆಯಿಂದ ಅಶ್ವಮೇಧಯಾಗ ಮಾಡಿದ ಪುಣ್ಯ ಲಭಿಸುತ್ತದೆ. ೩) ಸ್ತ್ರೀಯರು ಧರಿಸುವುದರಿಂದ ಅವರು ಸ್ತ್ರೀರೋಗಗಳಿಂದ ಮುಕ್ತರಾಗುತ್ತಾರೆ.

## ೧೨. ದ್ವಾದಶಮುಖ ರುದ್ರಾಕ್ಷಿ :--

ಹನ್ನೆರಡು ಮುಖಗಳಿರುತ್ತದೆ ಈ ರುದ್ರಾಕ್ಷಿಗೆ.

ರುದ್ರಾಕ್ಷಂ ದ್ವಾದಶಮುಖಂ
ಮಹಾವಿಷ್ಣು ಸ್ವರೂಪಕಮ್
ದ್ವಾದಶಾದಿತ್ಯರೂಪಂ ಚ
ಬಿಭರ್ತ್ಯೇವ ಹಿ ತತ್ಪರಮ್ (ರು.ಜಾ.೧೪)

ಇದು ಮಹಾವಿಷ್ಣುವಿನ ಸ್ವರೂಪ. ದ್ವಾದಶ ಆದಿತ್ಯರಾದ ಮಿತ್ರ, ರವಿ, ಭಾನು, ಖಗ, ಪೂಷಾನ, ಸೂರ್ಯ, ಹಿರಣ್ಯಗರ್ಭ, ಮರೀಚಿ, ಆದಿತ್ಯ ಸವಿತ್ರ, ಅರ್ಕ, ಭಾಸ್ಕರ -- ಇವರಿಗೆ ಇದು ಪ್ರತೀಕ. ಈ ರುದ್ರಾಕ್ಷಿಯನ್ನು ಸೂರ್ಯ ಪ್ರೀತ್ಯರ್ಥವಾಗಿ ಕಿವಿಯಲ್ಲಿ ಧರಿಸುತ್ತಾರೆ.

ಧಾರಣಫಲ :--೧) ಅರಿಯದೆ ಮಾಡಿದ ಗೋಹತ್ಯಾದೋಷ ನಿವಾರಣೆಯಾಗುತ್ತದೆ. ೨) ಅಶ್ವಮೇಧಯಾಗ ಮಾಡಿದ ಫಲ ಪ್ರಾಪ್ತಿಯಾಗುತ್ತದೆ. ೩) ದೈಹಿಕ ಹಾಗೂ ಮಾನಸಿಕ ವ್ಯಾಧಿಗಳು ನಿವಾರಣೆಯಾಗುತ್ತದೆ.

## ೧೩. ತ್ರಯೋದಶಮುಖ ರುದ್ರಾಕ್ಷಿ :--

ಇದಕ್ಕೆ ಹದಿಮೂರು ಮುಖಗಳು.

ತ್ರಯೋದಶಮುಖಂ ತ್ವಕ್ಷಂ
ಕಾಮದಂ ಸಿದ್ಧಿದಂ ಶುಭಮ್
ತಸ್ಯ ಧಾರಣಮಾತ್ರೇಣ
ಕಾಮದೇವಃ ಪ್ರಸೀದತಿ (ರು.ಜಾ.೧೫)

ಈ ರುದ್ರಾಕ್ಷಿಯು ಮನ್ಮಥನ ಪ್ರತೀಕ.

ಧಾರಣಫಲ :-- ೧) ಅಣಿಮಾದಿ ಅಷ್ಟಸಿದ್ಧಿಗಳು ಲಭಿಸುತ್ತದೆ. ೨) ಕಾಮದೇವನು ಪ್ರಸನ್ನನಾಗುತ್ತಾನೆ. ೩)ಹಾಲಿಗೆ ಹಾಕಿ ಬಿಸಿಮಾಡಿ ಕುಡಿದರೆ ದೇಹಸೌಂದರ್ಯವು ವರ್ಧಿಸುತ್ತದೆ.

## ೧೪. ಚತುರ್ದಶ ಮುಖ ರುದ್ರಾಕ್ಷಿ :--

ಹೆಸರೇ ಸೂಚಿಸುವಂತೆ ಈ ರುದ್ರಾಕ್ಷಿಗೆ ಹದಿನಾಲ್ಕು ಮುಖಗಳು.

ಚತುರ್ದಶಮುಖಂ ಚಾಕ್ಷಂ.
ರುದ್ರನೇತ್ರ ಸಮುದ್ಭವಮ್
ಸರ್ವವ್ಯಾಧಿಹರಂ ಚೈವ
ಸರ್ವದಾಽಽರೋಗ್ಯಮಾಪ್ನುಯಾತ್
(ರು.ಜಾ.೧೬)

ಈ ರುದ್ರಾಕ್ಷಿಯು ಶಿವನ ಕಣ್ಣಿನಿಂದ ಉದ್ಭವಿಸಿದ್ದು.

ಧಾರಣಫಲ :-- ೧) ಸಮಸ್ತ ರೋಗಗಳನ್ನೂ ಗುಣಪಡಿಸುತ್ತದೆ. ೨) ಯಾವಾಗಲೂ ಆರೋಗ್ಯದಿಂದಿಟ್ಟಿರುತ್ತದೆ. ೩) ಮಾನಸಿಕ ಆರೋಗ್ಯವನ್ನು ವರ್ಧಿಸುತ್ತದೆ. ೪) ಪಶುಗಳಿಗೆ ಸಂಭವಿಸುವ ವೇದನೆಗಳನ್ನೂ ನಿವಾರಿಸುತ್ತದೆ. ೫) ಶಿವಸಾಯುಜ್ಯವು ಲಭ್ಯವಾಗುತ್ತದೆ. ೬) ರುದ್ರಾಕ್ಷಿಯನ್ನು ಧರಿಸಿದವನು ಮತ್ತೆ ಮನುಷ್ಯನಾಗಿ ಭೂಮಿಯಲ್ಲಿ ಹುಟ್ಟುವುದಿಲ್ಲ. ಆತನಿಗೆ ಪುನರಾವರ್ತಿ ರಹಿತವಾಗಿ ಶಾಶ್ವತ ಬ್ರಹ್ಮಲೋಕ ಲಭಿಸುತ್ತದೆ. ಅರ್ಥಾತ್ ಅವನು ಬ್ರಹ್ಮಜ್ಞಾನಿಯಾಗಿ ಜೀವನ್ಮುಕ್ತನಾಗುತ್ತಾನೆ. "ನ ಚ ಪುನರಾವರ್ತತೇ ನ ಚ ಪುನರಾವರ್ತತ ಇತ್ಯೋಂ ಸತ್ಯಮಿತ್ಯುಪನಿಷತ್" ಎಂದು ಮುಕ್ತಾಯವಾಗುತ್ತದೆ ರುದ್ರಾಕ್ಷ ಜಾಬಾಲೋಪನಿಷತ್ತು.

**ಆಹಾರ ನಿಯಮ** :-- ರುದ್ರಾಕ್ಷಿಯನ್ನು ಧರಿಸಬೇಕೆಂದು ಇಚ್ಛಿಸುವವನು ಈ ಕೆಳಕಂಡ ನಿಯಮವನ್ನು ಪಾಲಿಸಬೇಕು.




ತಿರುಮಲೆ -- ತಿರುಪತಿ ದೇವಸ್ಥಾನಗಳು

## ಅಭಿಷೇಕ ಸೇವೆಗಳು

ತಿರುಮಲೆ ತಿರುಪತಿ ದೇವಸ್ಥಾನಗಳ ಆಡಳಿತ ಪರಿಧಿಯ ಆರು ದೇವಾಲಯಗಳಲ್ಲಿ ವಾರಕ್ಕೆ ಒಮ್ಮೆ ನಡೆಯುವ ಅಭಿಷೇಕ ಸಮಯದಲ್ಲಿ ಭಕ್ತರು ಒಬ್ಬರಿಗೆ ೫ ರೂಪಾಯಿನಂತೆ ಶುಲ್ಕ ನೀಡಿ ಅಭಿಷೇಕ ದರ್ಶನ ಹೊಂದಬಹುದು. ವಿವಿಧೆಡೆಗಳಲ್ಲಿರುವ ಈ ದೇವಾಲಯಗಳೆಂದರೆ---

1. ಶ್ರೀ ವೇದನಾರಾಯಣಸ್ವಾಮಿ ಆಲಯ --ನಾಗುಲಾಪುರಂ.

2. ಶ್ರೀ ಕಲ್ಯಾಣ ವೆಂಕಟೇಶ್ವರಸ್ವಾಮಿ ಆಲಯ --ನಾರಾಯಣವನಂ.

3. ಶ್ರೀ ವೇಣುಗೋಪಾಲಸ್ವಾಮಿ ಆಲಯ --ಕಾರ್ವೇಟಿನಗರ.

4. ಶ್ರೀ ಪ್ರಸನ್ನ ವೆಂಕಟೇಶ್ವರಸ್ವಾಮಿ ಆಲಯ --ಅಪ್ಪಲಾಯಗುಂಟ.

5. ಶ್ರೀ ವೆಂಕಟೇಶ್ವರಸ್ವಾಮಿ ಆಲಯ --ಶ್ರೀನಿವಾಸಮಂಗಾಪುರ.

6. ಆಲಯಸಮುದಾಯ --ಹೃಷೀಕೇಶ.

ಭಕ್ತ ಯಾತ್ರಿಕರು ಈ ವಿಶೇಷ ಸೇವೆಯನ್ನು ದರ್ಶಿಸಬೇಕೆಂದು ವಿನಂತಿಸಲಾಗಿದೆ.

**ತಿ. ತಿ. ದೇವಸ್ಥಾನಗಳು,**
ತಿರುಪತಿ.

ಮದ್ಯಂ ಮಾಂಸಂ ಚ ಲಶುನಂ
ಪಲಾಂಡುಂ ಶಿಗ್ರುಮೇವ ಚ
ಶ್ಲೇಷ್ಮಾತ್ರಕಂ ವಿಡ್ವರಾಹಂ
ಅಭಕ್ಷ್ಯಯಂ ವರ್ಜಯೇನ್ನರಃ (ರು.ಜಾ.೧೭)

ಹೆಂಡ ಸಾರಾಯಿ ಮುಂತಾದ ಮಾದಕ ದ್ರವ್ಯಗಳನ್ನು ಸೇವಿಸಕೂಡದು. ಇದು ಪಂಚಮಹಾ ಪಾತಕಗಳಲ್ಲಿ ಮೊದಲನೆಯದು. ಮಾಂಸ, ಬೆಳ್ಳುಳ್ಳಿ, ಈರುಳ್ಳಿಯೇ ಮುಂತಾದ ತಾಮಸಾಹಾರಗಳನ್ನು ವರ್ಜಿಸಬೇಕು.

### ರುದ್ರಾಕ್ಷಿಯನ್ನು ದೇಹದ ಯಾವ ಭಾಗದಲ್ಲಿ ಧರಿಸಿದರೆ ಏನೇನು ಫಲ ?

ತದ್ರುದ್ರಾಕ್ಷಂ ಕರೇಣ ಸ್ಪೃಷ್ಟ್ವಾ
ಧಾರಣ ಮಾತ್ರೇಣ
ದ್ವಿಸಹಸ್ರ ಗೋ
ಪ್ರದಾನ ಫಲಂ ಭವತಿ (ರು.ಜಾ.)

ರುದ್ರಾಕ್ಷಿಯನ್ನು ಮುಟ್ಟುವುದರಿಂದ ಹಾಗೂ ಅದನ್ನು ಧರಿಸುವುದರಿಂದ ಎರಡು ಸಾವಿರ ಗೋವುಗಳನ್ನು ದಾನಮಾಡಿದ ಫಲ ಲಭಿಸುತ್ತದೆ.

ತದ್ರುದ್ರಾಕ್ಷೇ ಕರ್ಣಯೋರ್ಧಾರ್ಯಮಾಣೇ
ಏಕಾದಶ ಸಹಸ್ರ ಗೋಪ್ರದಾನ ಫಲಂ ಭವತಿ

ರುದ್ರಾಕ್ಷಿಯನ್ನು ಕಿವಿಯಲ್ಲಿಧರಿಸಿದರೆ ಹನ್ನೊಂದು ಸಾವಿರ ಗೋದಾನ ಮಾಡಿದ ಪುಣ್ಯ ಲಭಿಸುತ್ತದೆ.

ತದ್ರುದ್ರಾಕ್ಷೇ ಶಿರಸಿ ಧಾರ್ಯಮಾಣೇ
ಕೋಟಿ ಗೋಪ್ರದಾನ ಫಲಂ ಭವತಿ

ರುದ್ರಾಕ್ಷಿಯನ್ನು ತಲೆಯಲ್ಲಿ ಧರಿಸಿದ್ದೇ ಆದರೆ ಕೋಟಿ ಗೋದಾನ ಮಾಡಿದ ಪುಣ್ಯ ಪ್ರಾಪ್ತಿಯಾಗುತ್ತದೆ.

### ರುದ್ರಾಕ್ಷಿಧಾರಣ ಮಂತ್ರ :

ಶಿರಸೀಶಾನ ಮಂತ್ರೇಣ
ಕಂಠೇ ತತ್ಪುರುಷೇಣ ತು
ಅಘೋರೇಣ ಗಲೇ ಧಾರ್ಯಂ
ತೇನೈವ ಹೃದಯೇಽಪಿ ಚ (ರು.ಜಾ.೨೦)

ಈಶಾನಃ ಸರ್ವವಿದ್ಯಾನಾಮೀಶ್ವರಃ
ಸರ್ವಭೂತಾನಾಂ ಬ್ರಹ್ಮಾಧಿಪತಿಃ
ಬ್ರಹ್ಮಣೋಽಧಿಪತಿರ್ಬ್ರಹ್ಮಾ
ಶಿವೋಮೇ ಅಸ್ತು ಸದಾಶಿವೋಮ್

ಎಂಬ ಮಂತ್ರೋಚ್ಚಾರಣೆಯಿಂದ ತಲೆಯಲ್ಲಿ ರುದ್ರಾಕ್ಷಿಯನ್ನು ಧರಿಸಬೇಕು.

ತತ್ಪುರುಷಾಯ ವಿದ್ಮಹೇ
ಮಹಾದೇವಾಯ ಧೀಮಹಿ
ತನ್ನೋರುದ್ರಃ ಪ್ರಚೋದಯಾತ್

--ಎಂಬ ಮಂತ್ರದಿಂದ ಕತ್ತಿನಲ್ಲಿ ಧರಿಸಬೇಕು.

ಅಘೋರೇಭ್ಯೋಽಥ ಘೋರೇಭ್ಯೋ
ಘೋರ ಘೋರ ತರೇಭ್ಯಃ
ಸರ್ವೇಭ್ಯಃ ಸರ್ವಶರ್ವೇಭ್ಯೋ
ನಮಸ್ತೇ ಅಸ್ತು ರುದ್ರ ರೂಪೇಭ್ಯಃ

--ಎಂಬ ಮಂತ್ರದಿಂದ ಕೊರಳಿನಲ್ಲಿ ಹಾಗೂ ಹೃದ್ದೇಶದಲ್ಲಿ ಧರಿಸಬೇಕು. ಅದೇ ಮಂತ್ರದಿಂದ ಮಣಿಕಟ್ಟಿನಲ್ಲೂ ಧರಿಸಬೇಕು.

### ಗಮನಿಸಬೇಕಾದ ವಿಚಾರ :

ಇದುವರೆಗೆ ರುದ್ರಾಕ್ಷಿಧಾರಣ ಫಲ ಹಾಗೂ ಯಾವಯಾವ ಅಂಗಗಳಲ್ಲಿ ಎಷ್ಟೆಷ್ಟು ರುದ್ರಾಕ್ಷಿಗಳನ್ನು ಯಾವಯಾವ ಮಂತ್ರೋಚ್ಚಾರಣೆ ಮಾಡುತ್ತಾ ಧರಿಸಬೇಕೆಂಬುದನ್ನು ತಿಳಿದೆವು. ಲೌಕಿಕ ವಿಜ್ಞಾನವು ತನ್ನ ಉತ್ತುಂಗ ಶಿಖರವನ್ನೇರಿ ವಿಜೃಂಭಿಸುತ್ತಿರುವಾಗ ಇವೆಲ್ಲಾ ನಿಜವೇ ಎಂಬ ಸಂದೇಹವುಂಟಾಗುವುದು ಸಾಮಾನ್ಯರಿಗೆ ಸ್ವಾಭಾವಿಕವೇ.

ಪೂರ್ವೋಕ್ತ ನಿಯಮವನ್ನನುಸರಿಸಿ, ವ್ರತನಿಷ್ಠನಾಗಿ, ಶುಚಿರ್ಭೂತನಾಗಿ, ಇಂದ್ರಿಯಗಳನ್ನು ನಿಗ್ರಹಿಸಿ, ಅರಿಷಡ್ವರ್ಗಗಳಿಂದ ಮುಕ್ತನಾದ ಯೋಗಿಯು ರುದ್ರಾಕ್ಷಿಯನ್ನು ಧರಿಸಿ ರುದ್ರ ನಮಕ ಚಮಕಗಳನ್ನು ಕ್ರಮಬದ್ಧವಾಗಿ ಪಠಿಸಿದರೆ ಹಿಂದೆ ಹೇಳಿದ ಎಲ್ಲ ಫಲಗಳೂ ಉಂಟಾಗುತ್ತದೆಂಬುದರಲ್ಲಿ ಯಾವ ಸಂಶಯವೂ ಇಲ್ಲ.

ಉಪಾಸಕರಿಗೋಸ್ಕರ ರುದ್ರಪುನಶ್ಚರಣ ವಿಧಿಯನ್ನೂ ಕೊಟ್ಟಿದೆ.

೧) ರುದ್ರ : ರುದ್ರನಮಕವನ್ನು ಒಮ್ಮೆ ಪಠಿಸಿ, ಚಮಕದ ೧ನೆಯ ಅನುವಾಕವನ್ನು ಪಠಿಸಬೇಕು. ಪುನಃ ನಮಕವನ್ನು ಪಠಿಸಿ, ಚಮಕದ ೨ನೆಯ ಅನುವಾಕವನ್ನು ಪಠಿಸಬೇಕು. ಈ ಕ್ರಮದಲ್ಲಿ ೧೧ ಸಲ ಪಠಿಸಿ ಚಮಕದ ೧೧ನೆಯ ಅನುವಾಕವನ್ನು ಪಠಿಸಿದರೆ ಒಂದು ರುದ್ರವಾಗುತ್ತದೆ.

೨) ರುದ್ರೈಕಾದಶನಿ : ೧೨೧ ಸರ್ತಿ ರುದ್ರವನ್ನು ಪಠಿಸುವುದು.

೩) ಮಹಾರುದ್ರ : ೧೩೩೧ ಸಲ ರುದ್ರವನ್ನು ಪಠಿಸಿದರೆ ಒಂದು ಮಹಾರುದ್ರವಾಗುವುದು.

೪) ಅತಿರುದ್ರ . ೧೪೬೪೧ ಸಲ ರುದ್ರವನ್ನು ಪಠಿಸುವುದು.

ಇವುಗಳಲ್ಲಿ ಒಂದಕ್ಕಿಂತ ಒಂದು ಶ್ರೇಷ್ಠವಾದುದು. ಯಾರು ಯಾರಿಗೆ ಯಾವುದ್ಯಾವುದು ಸಾಧ್ಯವೋ ಅದನ್ನು ಜಪಿಸಬಹುದು.

ಹೀಗೆ ರುದ್ರಾಕ್ಷಿಧಾರಣೆಯು ಮಹತ್ವಪೂರ್ಣವಾದುದು.



#  ಮುಂಡೇವಾಡಿ ರಾಮದಾಸರು 

ಕಲಬುರಗಿ ಜಿಲ್ಲೆಯ ಮಣೂರ ಕ್ಷೇತ್ರ ಶತಮಾನಗಳಿಂದ ಶಾಸನಗಳ ಪುರಾವೆಯ ಚಾರಿತ್ರಿಕ ಸಾಂಸ್ಕೃತಿಕ ಸೊತ್ತನ್ನು ಕಾಯ್ದುಕೊಂಡು ಬಂದಿದೆ. ಆಳಂದ, ನಾನೆಂದ ಭಾಗದ ಮಣೂರು ಶ್ರೇಷ್ಠ ಅಗ್ರಹಾರವಾಗಿದ್ದು ಅಧ್ಯಯನ ಹಾಗೂ ಸಂಶೋಧನೆಗೆ ಅವಕಾಶಮಾಡಿಕೊಟ್ಟಿದೆ. ಮಣೂರು ಗ್ರಾಮ ಶಿಲ್ಪ ಕಲೆಯಲ್ಲಿ ತನ್ನದೇ ಆದ ವೈಶಿಷ್ಟವನ್ನು ಕಾಪಾಡಿಕೊಂಡಂಥ ಸ್ಥಳ. ಹೃದಯವಂತಿಕೆಯ ಪ್ರದೇಶವಾಗಿದ್ದರಿಂದ ಇಲ್ಲಿ ಸರ್ವಧರ್ಮ ಸಮನ್ವಯ ಮತ್ತು ಸಮತೆಗಳ ಚಿಹ್ನೆ ನಿಚ್ಚಳವಾಗಿದೆ. ದಕ್ಷಿಣ ವಾಹಿನಿಯಾದ ಭೀಮಾನದಿಯ ತೆಕ್ಕೆಯಲ್ಲಿ ಮಾನವೀಯ ಮೌಲ್ಯಗಳನ್ನು ಸ್ಥಿರಗೊಳಿಸುವ ಚಿಂತನ ಮಂಥನಗಳ ನಡುವೆ ತಾತ್ವಿಕ ನೆಲೆಯಾಗಿ, ಶಿಲೆಯಾಗಿ ಮೂಡಿದೆ. ಮಧ್ವಾಚಾರ್ಯರ ಸಾಕ್ಷಾತ್ ಶಿಷ್ಯರಾದ ಮಾಧವತೀರ್ಥರು ತಪಸ್ಸು ಮಾಡಿದ ಪುಣ್ಯಭೂಮಿ. ಅವರ ವೃಂದಾವನ ಇಂದಿಗೂ ಸಕಲ ಧರ್ಮದವರಿಗೂ ಒಂದು ಸಂಜೀವಿನಿಯಾಗಿಸಕಲರಿಗೂ ಚೈತನ್ಯ ನೀಡುತ್ತದೆ. ಕಾಲಕಾಲಕ್ಕೆ ಈ ತಟದಲ್ಲಿ ಮಹಾಮಹಿಮರು ಜನ್ಮತಾಳಿ ಅಮೂಲ್ಯವಾದ ಗ್ರಂಥಗಳನ್ನು ಬರೆದು ತತ್ವಶಾಸ್ತ್ರವನ್ನು ಶ್ರೀಮಂತಗೊಳಿಸಿದ್ದಾರೆ. ಪೌರಷ ತತ್ವವನ್ನು ಸಾರುವ ದಾಸಸಾಹಿತ್ಯದ ತಿರುಳನ್ನು ತಿಳಿದ ದಿವಂಗತ ಹನುಮಂತಾಚಾರ್ಯರು ಇಲ್ಲಿಯೇ ಬಹುಕಾಲವಿದ್ದು "ಮಣ್ಣೂರುದಾಸ"ರೆಂದೇ ಖ್ಯಾತಗಳಿಸಿದವರು. ಆ ಪೌರುಷದ ದಾಸ ಸಾಹಿತ್ಯವನ್ನು ಗಟ್ಟಿಯಾಗಿ ನೆಲೆನಿಲ್ಲುವಂತೆ ಮಾಡಿದ ಮೂಲ ಚೇತನ "ಶ್ರೀ ಚೆನ್ನಕೇಶವನ" ಅನುಗ್ರಹ.

ಈ ಪರಂಪರೆಯಲ್ಲೇ ಆ ಕ್ಷೇತ್ರದ ವಾಸನೆಯನ್ನು ಅರಿತ ಮಹಾನುಭಾವರಲ್ಲಿ "ಅಪರೋಕ್ಷ" ಜ್ಞಾನಿಗಳಾದ "ಮುಂಡೇವಾಡಿ ರಾಮದಾಸರು" ಶ್ರೇಷ್ಠರು. ಸಾತ್ವಿಕ ದಂಪತಿಗಳಾದ ಅಪ್ಪಣ್ಣಾಚಾರ್ಯ ಮತ್ತು ಗಂಗಾಬಾಯಿಯವರು ಈ ಶ್ರೇಷ್ಠ ಪುತ್ರರತ್ನಕ್ಕೆ ಶಕೆ. ೧೭೭೮ ಭಾದ್ರಪದ ಶುಕ್ಲಪಕ್ಷ ಪಂಚಮಿ ದಿನಾಂಕ ೪-೮-೧೮೫೬ ರಂದು ಜನ್ಮವಿತ್ತರು. ಈ ದಿವ್ಯ ಬಾಲಕನಿಗೆ "ರಾಮ"ನೆಂದು ನಾಮಕರಣ ಮಾಡಿದರು. ನಕ್ಷತ್ರಕಾಂತಿಯ ಈ ಬಾಲಕ ತನ್ನ ಬಾಲ್ಯಾವಸ್ಥೆಯಲ್ಲಿ ಸಂಗೀತ ಬಗ್ಗೆ ತುಂಬ ತಲೆ ಕೆಡಿಸಿಕೊಂಡಿದ್ದರು. ಮನೆಯಲ್ಲಿ ಗಾಯನ ನಡೆದಾಗ ತಾನದ ಮೇಲೆ ಚಪ್ಪಾಳೆ ತಟ್ಟಿ ಹಿರಿಯರಿಂದ ಭೇಶ್ ಎನಿಸಿಕೊಂಡಿದ್ದರು. ಇವರು ಪಾಂಡುರಂಗನ ಪರಮ ಭಕ್ತರೂ ತಿರುಪತಿ ವೆಂಕಪ್ಪನ ದಾಸರೂ ಆಗಿದ್ದರು. ರಾಮದಾಸರು ಸತತವಾಗಿ ಮೂರು ವರ್ಷಕಾಲ ದಂಡ ನಮಸ್ಕಾರಹಾಕಿ ವೆಂಕಪ್ಪನ ದರ್ಶನ ಪಡೆದವರು. ಮಹಾಜ್ಞಾನಿಗಳಾದ ದಾಸರು ಅನೇಕ ದೈವಿಕ ಶಕ್ತಿಯ ಪವಾಡವನ್ನು ಮಾಡಿದ್ದಾರೆ. ದಾಸರಿಗೆ "ಸತ್ಯದ"ಹೊರತು ಬೇರೆ ದಾರಿ ಇಲ್ಲ. ಕಲ್ಲಿರಲಿ, ಮುಳ್ಳಿರಲಿ, ಏನೇ ಇರಲಿ ಆ ದಾರಿಯಲ್ಲಿ ಸಾಗುವ "ನಿಶ್ಚಲ" ಮನಸ್ಸು.

ಆ ಕಾಲದಲ್ಲಿ ಒಂದು ಅಪೂರ್ವ ಘಟನೆಯೊಂದು ನಡೆಯಿತು. ರಾಮದಾಸರು ಯಾವದೋ ಕೆಲಸಕ್ಕಾಗಿ ಸೋಲಾಪುರಕ್ಕೆ ಹೋಗುವ ಸಂದರ್ಭ ಬಂದಿತು. ಅವರು ಮುಂಡೇವಾಡಿಯಿಂದ ತಡವಲಗಾಕ್ಕೆ ಬರುವುದರಲ್ಲೇ ರೈಲು ಗಾಡಿ ಹೊರಟು ಹೋಗಿತ್ತು. ಆಗ ದಾಸರು ಸೋಲಾಪ್ರರಕ್ಕೆ ಟಿಕೆಟ್ ಪಡೆದುಕೊಳ್ಳಲು ಹೋದಾಗ ಸ್ಟೇಷನ್ ಮಾಸ್ಟರರು "ರಾಯರೆ" ರೈಲು ಹೋಯಿತಲ್ಲ ಈಗ ಟಿಕೇಟ್ ತೆಗೆದುಕೊಂಡು ಏನು ಮಾಡುತ್ತಿರಿ --ಎಂದು ವಿನಯದಿಂದ ಕೇಳಿದರು. 'ಇಲ್ಲಾ ಮಹಾರಾಯ ಮೊದಲು ಟಿಕೇಟ್ ಕೊಡು,ನನಗಾಗಿ ಗಾಡಿ ನಿಂತಿದೆ ನಾನು ಹೋಗಬೇಕಾಗಿದೆ' ಎಂದು ಹೇಳಿದರು. ಇವರ ಮಾತಿನಿಂದ ನಕ್ಕು'ಸ್ವಾಮಿ ನಿಮ್ಮ ಹಣವನ್ನು ವೃಥಾ ಹಾಳುಮಾಡಲು ಬಿಡುವುದಿಲ್ಲ ಮುಂದಿನ ಗಾಡಿಗೆ ಹೋಗಿರಿ' ಎಂದು ಹೇಳಿದನು. "ಏ ಮಹಾರಾಯ ಬೇಗ ಕೊಡು ನಿನ್ನ ಕೆಲಸ ನೀನು ಮಾಡು ನನಗಾಗಿ ಗಾಡಿ ನಿಂತಿದೆ" ಎಂದು ದೃಢವಾಗಿ ಹೇಳಿದರು. ಸರಕಾರದ ಬೊಕ್ಕಸಕ್ಕೆ ಲಾಭವಾಗುವದಾದರೆ ನಾನೇಕೆ ಇಲ್ಲ ಎನ್ನಲಿ ಎಂದು ಟಿಕೇಟ ನೀಡಿದನು. ಗಡಿಬಿಡಿಯಿಂದ ಬಂದ ದಾಸರು ಕೆಲವು ಗಜಗಳ ದೂರದಲ್ಲಿ ನಿಂತ ರೈಲು ಹತ್ತಿ ಕುಳಿತರು. ಇವರು ಹೋಗುವುದನ್ನೇ ನಿರೀಕ್ಷಿಸುತ್ತಿದ್ದ ಸ್ಟೇಷನ್ ಮಾಸ್ಟರ್ ದೂರದಲ್ಲಿ ಗಾಡಿ ನಿಂತಿದ್ದನ್ನು ನೋಡಿ ದೆಕ್ಕಸ ಬೆರಗಾಗಿ ನಿಂತನಂತೆ.

ಶ್ರೀ ರಾಮದಾಸರು ವೆಂಕಟೇಶ ದೇವರ ಅಂತರಂಗ ಭಕ್ತರಾಗಿದ್ದರು. ಇವರು ದಂಡ ನಮಸ್ಕಾರ ಹಾಕುತ್ತ ತಿರುಪತಿಗೆ ಹೊರಟಿದ್ದರು. ರಾಯಚೂರಿನ ಸಮೀಪ ಇವರು ಹೊರಟಾಗ ನಿಜಾಮರ ಸೇನಾಧಿಪತಿಯೊಬ್ಬ ಇವರು ಹೋಗುವುದನ್ನು ನೋಡಿ ಅಪಹಾಸ್ಯ ಮಾಡಿದನಂತೆ. "ಅಪರೋಕ್ಷಿತ"ರಾದ ದಾಸರು ಮನದಲ್ಲೆ ಅರಿತು ಸುಮ್ಮನಾದರು. ಆದರೆ ಇದನ್ನೆ ನೋಡುತ್ತಿದ್ದ ದಾಸರ ಶಿಷ್ಯರೊಬ್ಬರು ನಿಮಗೆ ಧೈರ್ಯವಿದ್ದರೆ ನಿಮ್ಮ ಬೂಟನ್ನು ಕಳಚಿ ಹಾಗೆ ನಿಲ್ಲಿರಿ ಎಂದರಂತೆ. ಇದೇನು ಮಹಾ ಎಂದು ಆ ಗರ್ವಿ ಸೇನಾಧಿಕಾರಿ ಬರಿಗಾಲಿನಲ್ಲಿ ನಿಲ್ಲಗಾಗಿ ಅತನ ಅಂಗಾಲಿಗೆ ಬೆಂಕಿ ಇಟ್ಟ ಅನುಭವವಾಗಿ ಜೋರಾಗಿ ಬೊಬ್ಬೆ ಇಟ್ಟನಂತೆ. ಆಗ ಆತನಿಗೆ ತನ್ನ ಗರ್ವದ ಅರಿವಾಗಿ ದಾಸರಿಗೆ ಕ್ಷಮೆ ಕೇಳಿ ಅವರಿಗೆ ಸರ್ವವಿಧದಲ್ಲೂ ಸಹಾಯ ಮಾಡಿದನಂತೆ. ರಾಮದಾಸರ ಶ್ರದ್ಧೆ ಅಚಲವಾದದ್ದು. ದೇವರನ್ನು ನಂಬಿದ ಮಹಾನುಭಾವರು. ಭೀಮಕಾರ್ಯದ ದಾಸರು ಎಲ್ಲರಿಂದ ವಂದ್ಯರಾಗಿ ಗಾನಲೋಲುಪರಾಗಿ, ಗಮ್ಯವಾದ ಶ್ರೀ ಹರಿಯನ್ನು ಗಾಯತ್ರಿ ಪುನಶ್ಚರಣ ಪೂರ್ವಕವಾಗಿ ಅರ್ಚಿಸಿ, ಮೆಚ್ಚಿಸಿ, ಸಾಕ್ಷಾತ್ಕರಿಸಿಕೊಂಡ ಮಹಾ ಚೈತನ್ಯ.

ದೀನದಲಿತ **ಹಾಡಿ** ನಮ್ಮೆಲ್ಲರನ್ನು ಪಾವನಗೊಳಿಸಿದ್ದಾರೆ. ಇವರು ದಿನಂಪ್ರತಿ ಭಜನೆ ಮಾಡಿ ಭಕ್ತಾದಿಗಳಿಗೆ ಅವರವರ ಅಂತರಂಗವನ್ನು ತಾವೇ ಅರಿತು ಪರಿಹಾರವನ್ನು ಸೂಚಿಸಿ ಮಾರ್ಗದರ್ಶನ ನೀಡುತ್ತಾರೆ. ಮುಂಡೇವಾಡಿ ರಾಮದಾಸರು ಅಪರೋಕ್ಷೀಕೃತ ಶ್ರೀಶರು. ಮಂತ್ರಾಲಯದ ಶ್ರೀ ರಾಘವೇಂದ್ರ ಸ್ವಾಮಿಗಳನ್ನು ಕಂಡವರು. ಈಗಲೂ ಕೂಡ ಮಂತ್ರಾಲಯದ ಪ್ರಭುಗಳ ವೃಂದಾವನದಲ್ಲಿ ಇದ್ದ ಸಾಲಿಗ್ರಾಮ ರಾಮದಾಸರ ಕಟ್ಟೆಯಲ್ಲಿ ಇದೆ. ದಾಸರ ಸಾಲಿಗ್ರಾಮ ರಾಯರ ವೃಂದಾವನದಲ್ಲಿ ಇದೆ. ಇವರ ಗುರುಗಳಾದ ಪಿತಾಂಬರ ಮುನಿಗಳ ಆದೇಶದಂತೆ ಪ್ರತಿ ಶುದ್ಧ ಏಕಾದಶಿಗೆ ಪಂಢರಪುರಕ್ಕೆ ಬರಲು ಹೇಳಿದಾಗ ಅವರ ಆಜ್ಞೆಯನ್ನು ಪಾಲಿಸಿದರು.

ರಾಮದಾಸರ ನಕ್ಷತ್ರಕಾಂತಿಯ ದಿವ್ಯ ತೇಜಸ್ಸು, ದೇವಪ್ರಭಾವದಿಂದ ಎಷ್ಟೋ ಅತಿಮಾನುಷ ಕೃತಿಗಳಿಂದ ಕೀರ್ತಿಯುಕ್ತರಾಗಿದ್ದಾರೆ. ತಾವು ಸಮರ್ಥವಾದ ಸಾಧಕರೆಂದು ತಮ್ಮ ಭಕ್ತರಿಗೆ ತೋರಿಸಿದ್ದಾರೆ. ಇವರು ಅಸಾಧರಣ ಘೋರ -- ಕಠೋರ ತಪಸ್ಸು ಮಾಡಿ ಬಹು ಉಚ್ಚಪರಂಪರೆಯನ್ನು ಹೊಂದಿ ಸುಪ್ರಸಿದ್ಧ ದಾಸವರೇಣ್ಯರೆನಿಸಿದ್ದಾರೆ. ಈಗಲೂ ಇವರ "ಕಟ್ಟೆ" ಮುಂಡೇವಾಡಿಯಲ್ಲಿ ಇದ್ದು ಭಕ್ತಾದಿಗಳನ್ನು ಕೈಬೀಸಿ ಕರೆಯುತ್ತಿದೆ. ಇದಕ್ಕೆ ಎಲ್ಲರೂ "ದಾಸರ ಕಟ್ಟೆ" ಎಂದೇ ಕರೆಯುತ್ತಾರೆ.

ರಾಘವೇಂದ್ರ. ರೆ. ಕುಲಕರ್ಣಿವಾಟ.

ಶ್ರೀ ವೆಂಕಟೇಶ್ವರಸ್ವಾಮಿ ದೇವಾಲಯ, ತಿರುಮಲೆ.

# ಉದಯಾಸ್ತಮಾನ ಸರ್ವ ಸೇವಾ ಯೋಜನೆ

ವರ್ಷಕ್ಕೊಂದು ದಿನ ಶ್ರೀ ವೆಂಕಟೇಶ್ವರಸ್ವಾಮಿಯ ಎಲ್ಲ ಸೇವೆಗಳ ವೆಚ್ಚವನ್ನೂ ಭರಿಸುವ ಭಕ್ತರಿಗಾಗಿ ದೇವಸ್ಥಾನದಲ್ಲಿನ ಉದಯಾಸ್ತಮಾನ ಪರ್ಯಂತ ಎಲ್ಲ ಸೇವೆಗಳನ್ನೂ ಮಾಡಿಸಲು ಅವಸಾಶ ಕಲ್ಪಿಸಿಕೊಡುವ ಒಂದು ವಿಶೇಷ ಯೋಜನೆಯ್ನು ರೂಪಿಸಲಾಗಿದೆ. ಈ ಸರ್ವಸೇವೆಯಲ್ಲಿ ಸುಪ್ರಭಾತ, ತೋಮಾಲೆ, ಅರ್ಚನೆ, (ಮೂರು ಬಾರಿ), ನೈವೇದ್ಯ ಹಾಗೂ ಮತ್ತಿತರ ಸೇವೆಗಳು ಸೇರಿವೆ. ಈ ಯೋಜನೆಯ ಪರಿಧಿಯಲ್ಲಿ ಆರ್ಜಿತ ಸೇವೆಗಳಾದ ಕಲ್ಯಾಣೋತ್ಸವ, ಊಂಜಲ್‌ಸೇವೆ, ಬ್ರಹ್ಮೋತ್ಸವ, ಕೋಯಿಲ್ ಆಳ್ವಾರ್ ತಿರುಮಂಜನ, ಸಹಸ್ರ ಕಲಶಾಭಿಷೇಕ, ತಿರುಪ್ಪಾವಡ, ವಾಹನಸೇವೆಗಳು ಮೊದಲಾದವು ಬರುವುದಿಲ್ಲ.

ಈ ಯೋಜನೆಯ ಹಲವು ವೈಶಿಷ್ಟ್ಯಗಳು ಹೀಗಿವೆ :--

* ಶುಕ್ರವಾರಗಳ ಹೊರತು ಇತರೆ ಯಾವುದೇ ದಿನಗಳ ಸರ್ವಸೇವೆಯ ದತ್ತಿಯಾಗಿ ಕಾರ್ಯನಿರ್ವಹಣಾಧಿಕಾರಿ ತಿ.ತಿ.ದೇ. ತಿರುಪತಿ ಇವರಿಗೆ 1 ಲಕ್ಷ ರೂಗಳ ಭಾರತದಲ್ಲಿನ ಯಾವುದೇ ಬ್ಯಾಂಕ್‌ನ ಡಿಮಾಂಡ್ ಡ್ರಾಫ್ಟನ್ನು ಕಳುಹಿಸಬೇಕು. ಶುಕ್ರವಾರಗಳಲ್ಲಿನ ಸರ್ವಸೇವೆಗಾಗಿ ನಿಗಧಿ ಆಗಿರುವ ದತ್ತಿಯ ಮೌಲ್ಯ ರೂ. 3 ಲಕ್ಷ, ಇದರಲ್ಲಿ ಶುಕ್ರವಾರದ ಅಭಿಷೇಕವೂ ಸೇರುವುದು.

* ಗೊತ್ತಾದ ದಿನದಂದು ಎಲ್ಲ ಸೇವೆಗಳಿಗೂ ಆರು ಮಂದಿಗೆ ಪ್ರವೇಶ ನೀಡಲಾಗುಲವುದು. ಎಂದರೆ ಶುಕ್ರವಾರಗಳ ಹೊರತು ಸುಪ್ರಭಾತ, ತೋಮಾಲೆ, ಸಹಸ್ರನಾಮಾರ್ಚನೆ, ಏಕಾಂತ ಸೇವೆಗಳು. ಆಯಾ ದಿನದಲ್ಲಿ ಇಲ್ಲಿನ ಯಾವುದೇ ಸೇವೆಯನ್ನು ಯಾವ ಕಾರಣಕ್ಕಾಗಿಯಾದರೂ ಮುಂದೂಡಲಾಗಿದ್ದಲ್ಲಿ ಅಂತಹ ಸೇವಾ ಪ್ರವೇಶವಿರದು.

* ದತ್ತಿ ನೀಡಿದವರ ಹೆಸರನ್ನು ದೇವಸ್ಥಾನದ ಒಳಗಡೆ ಎದ್ದು ಕಾಣುವಂತೆ ಬರೆದು ಪ್ರದರ್ಶಿಸಲಾಗುವುದು. ಆ ದಿನದ ಆಸ್ಥಾನದಲ್ಲಿ ಅವರ ಹೆಸರು ಗೋತ್ರಗಳನ್ನು ಹೇಳಲಾಗುವುದು.

* ಆ ದಿನದ ಎಲ್ಲ ಆರ್ಜಿತಸೇವೆಗಳನ್ನು ದತ್ತಿ ನೀಡಿದವರು ಹಾಗೂ ಅವರ ಪೈಕಿಯವರು ವೀಕ್ಷಿಸಲು ಅನುಮತಿ ನೀಡಲಾಗುತ್ತದೆ.

* ದತ್ತಿ ನೀಡಿದವರಿಗೆ (1) ಶ್ರೀ ವೆಂಕಟೇಶ್ವರಸ್ವಾಮಿಯವರ ಕಲ್ಯಾಣೋತ್ಸವದಲ್ಲಿ ಅಂದು ಬಳಸಲಾದ ಒಂದು ಶೇಷವಸ್ತ್ರ, (2) 25 ಲಾಡು ಹಾಗೂ ವಡೆಗಳನ್ನು ಬಹೂಕರಿಸಲಾಗುವುದು.

* ವಸ್ತು, ವಿಷಯಗಳ ದರಗಳು ಅಸಹಜವಾಗಿ ಏರಿದಲ್ಲಿ ದತ್ತಿ ನೀಡಿದವರಿಗೆ ಹೆಚ್ಚಿನ ದತ್ತಿಯನ್ನು ನೀಡಲು ಅವಕಾಶ ನೀಡಲಾಗುವುದು ಒಂದು ಬಾರಿಗೆ 10 ಶತಾಂಶ ದಂತೆ; ದತ್ತಿ ನೀಡಿದವರು ಈ ಹೆಚ್ಚಿನ ಮೊತ್ತವನ್ನು ನೀಡಲು ಮುಂದೆ ಬರದಿದ್ದಲ್ಲಿ ತಿ.ತಿ.ದೇ. ಬೇರೊಂದು ದತ್ತಿಯನ್ನು ಸ್ವೀಕರಿಸಲು ಸ್ವತಂತ್ರವಾಗಿರುತ್ತದೆ. ಆಗ ಸೇವೆಗಳನ್ನು ಇಬ್ಬರು ಅಥವಾ ಹೆಚ್ಚಿನ ಗೃಹಸ್ಥರ ಹೆಸರಿನಲ್ಲಿ ನಡೆಸಲಾಗುವುದು. ದತ್ತಿ ನೀಡಿದವರಿಗೆ ಸೇವಾ ದಿನವನ್ನು ಮೂವತ್ತು ದಿನಗಳ ಮೊದಲೇ ಸಾಮಾನ್ಯವಾಗಿ ತಿಳಿಸಲಾಗುವುದು.

ಇತರ ವಿವರಗಳಿಗೆ ಹಾಗೂ ಸ್ಪಷ್ಟೀಕರಣಕ್ಕೆ ಬರೆಯಿರಿ :

**ಕಾರ್ಯನಿರ್ವಹಣಾಧಿಕಾರಿ,**

ತಿ. ತಿ. ದೇ., ತಿರುಪತಿ.

# ಹಾರೀತ ಧರ್ಮ ಶಾಸ್ತ್ರ

---ಕಂದಾಡೈ ಕೇಶವನ್.

"ವೇದೋ ಧರ್ಮ ಮೂಲಂ
ತದ್ವಿಧಾಂ ಚ ಸ್ಮೃತಿ ಶೀಲೆ"

ಎಂಬುವ ಸೂತ್ರದ ಅರ್ಥ ಧರ್ಮಕ್ಕೆ ಮೂಲ ವೇದ ಎಂದು. ಅದನ್ನು ತಿಳಿದು ಅನುಷ್ಠಾನಕ್ಕೆ ತಂದ ಆಚಾರಶೀಲಗಳೇ ಧರ್ಮ. ಇವುಗಳನ್ನು ವಿವರಿಸುವ ಶಾಸ್ತ್ರವೇ ಧರ್ಮ. ಶಾಸ್ತ್ರ ಧರ್ಮಕ್ಕೆ ಅನೇ ಹಲವು ವ್ಯಾಖ್ಯಾನಗಳನ್ನು ಮಾಡಿದ್ದಾ ಸಮಯಃ ಪ್ರಮಾಣಂ ವೇದಾಶ್ಚ -- ಧ ಯಾದ ಪ್ರಮಾಣ ವೇದಗಳು. ಮನುವೂ ಕೂ

"ವೇದೋಽಖಿಲೋ ಧರ್ಮ ಮೂಲಂ
ಸ್ಮೃತಿಶೀಲೇ ಚ ತದ್ವಿಧಾಂ
ಆಚಾರಶ್ಚೈವ ಸಾಧೂನಾಂ
ಆತ್ಮನಸ್ತುಷ್ಟಿರೇವ ಚ"

ಎಂಬುವುದಾಗಿ ಹೇಳುವಾಗ ವೇದವು ಧರ್ಮಕ್ಕೆ ಮೂಲ. ಅದನ್ನು ಆಚರಿಸುವ ಸಾಧುಗಳ ಆಚಾರ, ವ್ಯವಹಾರ, ತೃಪ್ತಿತರುವಂತಹದು ಎಂಬುವುದಾಗಿ ಹೇಳಿದ್ದಾನೆ. ಶ್ರುತಿಸ್ಮೃತಿಗಳಲ್ಲಿ ಹೇಳಿರುವ ಸದಾಚಾರಗಳು ಮಾನವನಿಗೆ ಹಿತಪುರುಷಾರ್ಥಗಳನ್ನು ನೀಡಿ ಸಮಾಜದಲ್ಲಿ ಭದ್ರತೆ ನೆಮ್ಮದಿಕೊಟ್ಟು ಮನುಷ್ಯನ ಕರ್ತವ್ಯಗಳನ್ನು ತಿಳಿಸುತ್ತವೆ. ಧರ್ಮಶಾಸ್ತ್ರಗಳು ಹಲವು ವಿಧಗಳಲ್ಲಿ ವಿವರಿಸಿವೆ. ಜೀವನ ಧರ್ಮ, ಮಾನವ ಧರ್ಮ, ಲೋಕ ನೀತಿ, ರೀತಿ ಕಟ್ಟುಪಾಡುಗಳು, ನಿಯಮ, ಮಾರ್ಗ ಇವುಗಳನ್ನೆಲ್ಲಾ ತಿಳಿಸುವ ಶಾಸ್ತ್ರಗಳೇ ಧರ್ಮ ಶಾಸ್ತ್ರಗಳು. ವ್ಯಾಸರು ತಮ್ಮ ಮಹಾಭಾರತದಲ್ಲಿ "ಧರ್ಮಲಾಭಾತ್ ಪರಂ ನ ಸ್ಯಾತ್ ತಸ್ಮಾತ್ ಧರ್ಮಂ ಚರ ಉತ್ತಮಂ" ಎಂಬುವುದಾಗಿ ಸಾರಿದ್ದಾರೆ. ಧರ್ಮಕ್ಕಿಂತ ಉತ್ತಮವಾದ ಸಂಪಾದನೆ ಬೇರೊಂದಿಲ್ಲ. ಎಂತಹ ಕ್ಲಿಷ್ಟ ಕಾಲದಲ್ಲೂ ಧರ್ಮವನ್ನು ಬಿಡದೇ ಪರಿಪಾಲಿಸಬೇಕೆಂಬುದೇ ಎಲ್ಲಾ ಶಾಸ್ತ್ರಕಾರರ ಮತ -- ಅರ್ಥ, ಕಾಮ, ಮೋಕ್ಷಗಳನ್ನು ಧರ್ಮಮಾರ್ಗದಿಂದಲೇ ಗಳಿಸಿದರೆ ಶ್ರೇಯಸ್ಸು ಎಂಬುವುದು ಎಲ್ಲಾ ಶಾಸ್ತ್ರಕಾರರ ಅಭಿಪ್ರಾಯ. "ಆಚಾರೋ ಪರಮೋ ಧರ್ಮಃ ಧರ್ಮಸ್ಯ ಪ್ರಭುರಚ್ಯುತಃ" ಎಂಬುವುದು ಭೀಷ್ಮಾಚಾರ್ಯರ ಉಕ್ತಿ. ಧರ್ಮ ಸೂತ್ರಗಳಲ್ಲಿ ಮುಖ್ಯವಾದವು-- ಮನುಧರ್ಮಸ್ಮೃತಿ, ಗೌತಮ ಧರ್ಮಸೂತ್ರ, ಬೌಧಾಯನ ಧರ್ಮಸೂತ್ರ, ಆಪಸ್ತಂಭ ಧರ್ಮಸೂತ್ರ, ವಶಿಷ್ಠ ಧರ್ಮಸೂತ್ರ, ಜೈಮಿನಿ ಧರ್ಮಸೂತ್ರ, ವಿಷ್ಣು ಧರ್ಮಸೂತ್ರ, ಕೌಟಿಲ್ಯನ ಅರ್ಥಶಾಸ್ತ್ರ ಗರ್ಗ ಸಂಹಿತೆ, ಬೃಹಸ್ಪತಿ ಅರ್ಥಶಾಸ್ತ್ರ, ಶಂಖಲಿಖಿತ ಧರ್ಮಸೂತ್ರ, ವೈಖಾನಸ ಗೃಹ್ಯಸೂತ್ರ, ಸ್ಮೃತಿ ಚಂದ್ರಿಕಾ, ಯಾಜ್ಞವಲ್ಕ್ಯ ಸ್ಮೃತಿ, ಶಾಂಡಿಲ್ಯ ಸ್ಮೃತಿ, ಪರಾಶರ ಸ್ಮೃತಿ, ನಾರದ ಸ್ಮೃತಿ, ಹಾರೀತ ಸ್ಮೃತಿ ಹಾಗೂ ಅನೇಕ ಹಲವು ಸ್ಮೃತಿಗಳು ಇವೆ. ಹಾರೀತ ಸ್ಮೃತಿಯು ಕೇಶವನಾಮದಿಂದ ಪ್ರಾರಂಭವಾಗುತ್ತೆ.

"ಯೇ ವರ್ಣಾಶ್ರಮ ಧರ್ಮಸ್ಥಾಸ್ತೇ
ಭಕ್ತಾಃ ಕೇಶವಂ ಪ್ರತಿ
ಇತಿ ಪೂರ್ವಂ ತ್ವಯಾ ಪ್ರೋಕ್ತಂ
ಭೂರ್ಭುವಸ್ಸ್ವರ್ದ್ವಿಜೋತ್ತಮಾಃ ೧

ವರ್ಣಾನಾಂ ಆಶ್ರಮಾಣಾಂ ಚ
ಧರ್ಮಾನ್ನೋ ಬ್ರೂಹಿ ಸತ್ತಮ
ಯೇನ ಸಂತುಷ್ಯತೇ ದೇವೋ
ನಾರಸಿಂಹಃ ಸನಾತನಃ 2

ಈ ಶ್ಲೋಕದಲ್ಲಿ ಮಾರ್ಕಂಡೇಯ ಮುನಿಗಳನ್ನು ಕುರಿತು ಕೇಳಿದ ಪ್ರಶ್ನೆ. ಯಾವ ದ್ವಿಜರು ವರ್ಣಾಶ್ರಮ ಧರ್ಮದಲ್ಲಿ ನಿರತರೋ ಅವರು ಲೋಕತ್ರಯಾತ್ಮಕನಾದ ವಿಷ್ಣುವಿನಲ್ಲಿ ಭಕ್ತರು ಎಂಬುವುದಾಗಿ ನೀನು ಹಿಂದೆ ಹೇಳಿರುವೆ. ಯಾವುದರಿಂದ ಆದಿ ಪುರುಷನಾದ ವಿಷ್ಣುವು ಸಂತೋಷಿತನಾಗುತ್ತಾನೋ ಅಂತಹ ವರ್ಣಾಶ್ರಮ ಧರ್ಮಗಳನ್ನು ತಿಳಿಸು ಎಂಬುವುದಾಗಿ ಮುಂದಿನ ಶ್ಲೋಕದಲ್ಲಿ ಮಾರ್ಕಂಡೇಯ ಋಷಿಗಳು ಹೇಳುತ್ತಾರೆ--

"ಅತ್ರಾಹಂ ಕಥಯಿಷ್ಯಾಮಿ
ಪುರಾವೃತ್ತಂ ಅನುತ್ತಮಂ
ಋಷಿಭಿಃ ಸಹಸಂವಾದಂ
ಹಾರೀತಸ್ಯ ಮಹಾತ್ಮನಃ
ಹಾರೀತಂ ಧರ್ಮ ಸರ್ವಜ್ಞಂ
ಆಸೀನಮಿವ ಪಾವಕಂ
ಪ್ರಣಿಪತ್ಯಾಬ್ರುವನ್ ಸರ್ವೇ
ಮುನಯೋ ಧರ್ಮಕಾಂಕ್ಷಿಣಃ

ಪೂರ್ವದಲ್ಲಿ ಹಾರೀತ ಮುನಿಗಳು ಋಷಿಗಳೊಡನೆ ಸಂವಾದ ರೂಪದಲ್ಲಿ ಹೇಳಿದ ಧರ್ಮ ಶಾಸ್ತ್ರವನ್ನು ಹೇಳುತ್ತೇನೆ. ಸಕಲ ಧರ್ಮಗಳನ್ನು ಅರಿತ ಹಾರೀತನನ್ನು ನಮಸ್ಕರಿಸಿ ಧರ್ಮಗಳನ್ನು ತಿಳಿಯಲು ಋಷಿಗಳು ಇಚ್ಛೆ ಪಟ್ಟರು. 'ಶಾಶ್ವತವಾದ ವರ್ಣಾಶ್ರಮ ಧರ್ಮಗಳನ್ನೂ ಯೋಗ ಶಾಸ್ತ್ರವನ್ನೂ ಹೇಳುತ್ತೇನೆ ಕೇಳಿ ಮುನಿಪುಂಗವರೇ' ಎಂಬುವುದಾಗಿ ಹಾರೀತರು ಹೇಳುತ್ತಾ ಮಾನವರು ಅದನ್ನು ತಿಳಿದರೆ ಮನುಜರು ಜನ್ಮಸಂಸಾರ ಬಂಧನಗಳಿಂದ ಮುಕ್ತರಾಗುತ್ತಾರೆ ಎಂಬುವುದಾಗಿ ತಿಳಿಸಿ ತರುವಾಯ ಜಗತ್ ಸೃಷ್ಟಿ ವಿಚಾರವನ್ನು ತಿಳಿಸುತ್ತಾರೆ. ಶ್ರೀಮನ್ನಾರಾಯಣನು ಆದಿಯಲ್ಲಿ ಕ್ಷೀರಸಾಗರ ಶಯನನಾಗಿ ಲಕ್ಷ್ಮಿಯೊಡನೆ ಕೂಡಿರುವಾಗ ವಿಷ್ಣುವಿನ ನಾಭಿ ಕಮಲದಿಂದ ಬ್ರಹ್ಮನ ಜನ್ಮ. ಇದೇ ಪ್ರಪಂಚದ ಸೃಷ್ಟಿಗೆ ನಾಂದಿ. ಬ್ರಹ್ಮನನ್ನು ಹಾರೀತರು ವರ್ಣಿಸುವಾಗ--

"ತಸ್ಯ ಸುಪ್ತಸ್ಯ ನಾಭೌ ತು
ಮಹತ್ ಪದ್ಮಂ ಅಭೂತ್ ಕಿಲ
ಪದ್ಮಮಧ್ಯೇ ಭವದ್ಬ್ರಹ್ಮ
ವೇದವೇದಾಂಗ ಭೂಷಣಃ"

ವೇದ ವೇದಾಂಗಳೇ ಬ್ರಾಹ್ಮಣನಿಗೆ ಭೂಷಣಗಳು ಎಂದು ಹೇಳುತ್ತಾ, ಆ ಬ್ರಹ್ಮನು ವಿಷ್ಣುವಿನ ಆಜ್ಞೆಯಂತೆ ದೇವ ಅಸುರ ಮಾನವರನ್ನು ಸಮಸ್ತ ಜಗತ್ತನ್ನು ಸೃಷ್ಟಿಸಿ ಯಜ್ಞಸಿದ್ಧಿಗೋಸ್ಕರ ಪಾಪರಹಿತರಾದ ಬ್ರಾಹ್ಮಣರನ್ನು ಮುಖದಿಂದಲೂ, ಕ್ಷತ್ರಿಯರನ್ನು ಬಾಹುಗಳಿಂದಲೂ ವೈಶ್ಯರನ್ನು ತೊಡೆಗಳಿಂದಲೂ ಶೂದ್ರರನ್ನು ಪಾದಗಳಿಂದಲೂ ಸೃಷ್ಟಿಸಿದನು ಎಂಬುವುದಾಗಿ ಹೇಳುತ್ತಾರೆ. ಹಾರೀತರು ಹೇಳಿರುವ--

ಯಜ್ಞಸಿದ್ಧ್ಯರ್ಥ ಮನಘಾ
ಬ್ರಾಹ್ಮಣಾ ಮುಖತೋಽಸೃಜತ್
ಅಸೃಜತ್ ಕ್ಷತ್ರಿಯಾ ಬಾಹ್ವೋಃ
ವೈಶ್ಯಾ ಊರುದೇಶತಃ
ಶೂದ್ರಾಂಶ್ಚ ಪಾದಯೋಃ
ಸೃಷ್ಟ್ವಾ ತೇಷಾಂ ಚ ಅನುಪೂರ್ವಶಃ

ಎಂಬುವ ಈ ಅಂಶವೇ ಪುರುಷಸೂಕ್ತದಲ್ಲಿ--

"ಬ್ರಾಹ್ಮಣೋಽಸ್ಯ ಮುಖಮಾಸೀತ್
ಬಾಹೂ ರಾಜನ್ಯಃ ಕೃತಃ
ಊರೂ ತದಸ್ಯ ಯದ್ವೈಶ್ಯಃ
ಪದಾಂ ಶೂದ್ರೋ ಅಜಾಯತ

--ಎಂಬುವುದಾಗಿ ಉಕ್ತವಾಗಿದೆ.

ಭಗವದ್ಗೀತೆಯಲ್ಲಿ ಶ್ರೀಕೃಷ್ಣ ಪರಮಾತ್ಮನು ಗುಣ ಕರ್ಮಾನುಸಾರ ನಾಲ್ಕು ವರ್ಣಗಳನ್ನು ನಾನು ಸೃಷ್ಟಿಸಿದೆನು ಎಂಬುವುದಾಗಿ ಹೇಳಿದ್ದಾನೆ.

"ಚಾತುರ್ವರ್ಣ್ಯಂ ಮಯಾ
ಸೃಷ್ಟಂ ಗುಣಕರ್ಮ ವಿಭಾಗಶಃ"

# ಶ್ರೀ ಪದ್ಮಾವತೀ ಅಮ್ಮನವರ ದೇವಾಲಯ

## ತಿರುಚಾನೂರು

*ಅಲಮೇಲು ಮಂಗಾಪುರವೆಂದು ಹೆಸರಾದ ಈ ಊರು ತಿರುಪತಿಯಿಂದ ನಾಲ್ಕು ಮೈಲು ದೂರದಲ್ಲಿದೆ. ತಿರುಮಲೆಯ ದರ್ಶನವಾದ ಮೇಲೆ ಈ ಊರನ್ನು ದರ್ಶಿಸಿ ಪೂರ್ಣಕಾಮರಾಗುವುದು ಪರಂಪರೆ.*

### ಆಲಯ ಕಾರ್ಯಕ್ರಮ.

| | |
|---|---|
| ಸುಪ್ರಭಾತ | ಬೆಳಗ್ಗೆ 5--00 ಗಂಟೆಗೆ |
| ಸಹಸ್ರನಾಮಾರ್ಚನೆ | ಬೆಳಗ್ಗೆ 5--30 ಗಂಟೆಗೆ |
| (ಶುಲ್ಕಸಹಿತ ಪ್ರವೇಶ) | |
| 1ನೇ ಗಂಟೆ | ಬೆಳಗ್ಗೆ 6--00 ಗಂಟೆಗೆ |
| ಸರ್ವದರ್ಶನ | ಬೆಳಗ್ಗೆ 6--30 ಗಂಟೆಗೆ |
| ಶುದ್ಧಿ 2ನೇ ಗಂಟೆ | ಬೆಳಗ್ಗೆ 11--30 ಗಂಟೆಗೆ |
| ಸರ್ವದರ್ಶನ | ಮಧ್ಯಾಹ್ನ 12--00 ಗಂಟೆಗೆ |
| 3ನೇ ಗಂಟೆ | ಸಂಜೆ 6--00 ಗಂಟೆಗೆ |
| ಸರ್ವದರ್ಶನ | ಸಂಜೆ 6--30 ಗಂಟೆಗೆ |
| ಶುದ್ಧಿ | ರಾತ್ರಿ 8--45 ಗಂಟೆಗೆ |
| ಏಕಾಂತ | ರಾತ್ರಿ 9--00 ಗಂಟೆಗೆ |

### ಶುಕ್ರವಾರಗಳಲ್ಲಿ

| | |
|---|---|
| ಅಭಿಷೇಕ | ಬೆಳಗ್ಗೆ 9--00 ಗಂಟೆಗೆ |
| (ರೂ. 100/-- ಶುಲ್ಕದಿಂದ ಒಬ್ಬರಿಗೆ ಪ್ರವೇಶ) | |
| (ಅಭಿಷೇಕಾನಂತರ ದರ್ಶನ ಒಬ್ಬರಿಗೆ ರೂ 5/--) | |
| ಎರಡನೇ ಗಂಟೆ | ಬೆಳಗ್ಗೆ 11--00 ಗಂಟೆಗೆ |
| ಸರ್ವದರ್ಶನ | ಬೆಳಗ್ಗೆ 11--30 ಗಂಟೆಗೆ |
| ಊಂಜಲ್‌ಸೇವೆ | ಸಂಜೆ 7--00 ಗಂಟೆಗೆ |
| (ಮುಖುರ ಮಂಟಪದಲ್ಲಿ, ಶುಲ್ಕ ರೂ 150/--) | |
| (5 ಗ್ರಾಂಗಳ ಬೆಳ್ಳಿಯ ಪದಕ ಬಹುಮಾನ ಉಂಟು) | |
| 3ನೇ ಗಂಟೆ | ರಾತ್ರಿ 8--00 ಗಂಟೆಗೆ |
| ಸರ್ವದರ್ಶನ | ರಾತ್ರಿ 8--30 ಗಂಟೆಗೆ |
| ಶುದ್ಧಿ | ರಾತ್ರಿ 9--30 ಗಂಟೆಗೆ |
| ಏಕಾಂತಸೇವೆ | ರಾತ್ರಿ 9--45 ಗಂಟೆಗೆ |

ಪೇಷ್ಕಾರ್.

ಗುಣವಿಭಾಗವಾಗಿ ಬುದ್ಧಿಗೆ ಪ್ರಧಾನವಾಗಿ ಸಾತ್ವಿಕ ಸ್ವಭಾವದಲ್ಲಿರುವ ಬ್ರಾಹ್ಮಣರನ್ನು ಯಜ್ಞ ಯಾಗಾದಿಕರ್ಮದಲ್ಲಿ ನಿರತರಾಗಿ ಲೋಕಕಲ್ಯಾಣಕ್ಕೆ ಸಹಾಯಮಾಡಲು ವಿದ್ಯೆ, ಯಜ್ಞ, ತಪಸ್ಸು, ಭಗವದಾರಾಧನ ಕ್ರಮಗಳಲ್ಲಿ ನಿರತರಾಗಿರಲು ನಿಯಮಿತರಾಗಿದ್ದಾರೆ. ಭಾವಕ್ಕೆ ರಾಜ್ಯರಕ್ಷಣೆಗೆ ಕ್ಷತ್ರಿಯರನ್ನೂ, ಕಾರ್ಮಿಕ ವ್ಯಾಪಾರಗಳಲ್ಲಿ ನಿರತರಾಗಿರಲು ವೈಶ್ಯರನ್ನೂ, ಸೇವಾ ಮನೋಭಾವವುಳ್ಳವರಾಗಿ ಕೃಷಿಗೋರಕ್ಷಣೆಗಳಲ್ಲಿ ನಿರತರಾಗಿರಲು ಶೂದ್ರರನ್ನೂ ಸೃಷ್ಟಿಮಾಡಿದ್ದಾನೆ, ವರ್ಣಾಶ್ರಮ ಧರ್ಮಗಳನ್ನು ಹಾರೀತರು ಬಹು ವಿಶದವಾಗಿ ಸಮಂಜಸವಾಗಿ ಹೇಳಿದ್ದಾರೆ. ಆಯಾ ವರ್ಣದವರು ಅವರವರ ಕರ್ಮಗಳಲ್ಲಿ ನಿರತರಾಗಿ ಸಿದ್ಧಿಯನ್ನು ಪಡೆದು ಇಹಪರಗಳಲ್ಲಿ ಸುಖವನ್ನು ಅನುಭವಿಸಬಹುದೆಂದು ಅವರ ಮತ. ಪ್ರತಿಯೊಬ್ಬರೂ ತಮ್ಮ ತಮ್ಮ ಗುಣಕ್ಕೆ ತಕ್ಕಂತೆ ಅಭಿರುಚಿಗೆ ತಕ್ಕಂತೆ ಜೀವನೋಪಾಯಕ್ಕೆ ಕರ್ಮವನ್ನು ಮಾಡಿ ವೃತ್ತಿಯಲ್ಲಿ ಸಂಸಿದ್ಧಿಯನ್ನು ಪಡೆಯಬಹುದು. ವರ್ಣಗಳು ಒಂದು ಸಮಾಜದ ಅಂಗಾಂಗಗಳು. ದೇಹಕ್ಕೆ ಮೆದುಳು, ಬಾಹುಗಳು, ಕಾಲುಗಳು, ತೊಡೆಗಳು ಹೇಗೆ ಮುಖ್ಯವೋ ಹಾಗೆಯೇ ಸಮಾಜಕ್ಕೆ ಬುದ್ಧಿವಂತರು, ರಕ್ಷಕರು, ವಾಣಿಜ್ಯಗಾರರೂ, ಕೃಷಿಯಿಂದ ನಮ್ಮ ಅನ್ನ ಆಹಾರ ಒದಗಿಸುವಂತಹ ರೈತಬಾಂಧವರೂ ಬೇಕು. ಎಲ್ಲರೂ ಅವರವರ ಕ್ಷೇತ್ರದಲ್ಲಿ ಪ್ರಾಧಾನ್ಯರೇ. ಒಬ್ಬಕೀಳು ಒಬ್ಬ ಮೇಲು ಎಂಬುದು ಹಿಂದೂ ಧರ್ಮದಲ್ಲಿ ಇಲ್ಲ. ಜನರ ಹಿತಕ್ಕಾಗಿ, ಲೋಕ ಕಲ್ಯಾಣಕ್ಕಾಗಿಯೇ ಅವರವರ ಗುಣಕ್ಕೆ ತಕ್ಕಾಗಿ ಕರ್ಮಗಳನ್ನು ಮಾಡಲು ನಾಲ್ಕು ವರ್ಣಗಳ ವಿಭಾಗವನ್ನು ಹಿಂದಿನವರು ಮಾಡಿದ್ದಾರೆ. ಶ್ರೀಮದ್ಭಾಗವತದ ದಶಮಸ್ಕಂಧದಲ್ಲಿ ನಂದಗೋಪನು ತಮ್ಮ ವೃತ್ತಿಧರ್ಮಕ್ಕೆ ಅನುಗುಣವಾಗಿ ಇಂದ್ರಪೂಜೆಯನ್ನು ಮಾಡದೇಕೆಂದು ಅಪೇಕ್ಷಿಪಟ್ಟಾಗ, ಶ್ರೀಕೃಷ್ಣನು ಜೀವಿಯು ಕರ್ಮದಿಂದ ಹುಟ್ಟುತ್ತಾನೆ. ಸುಖದುಃಖ ಎಲ್ಲವೂ ಕರ್ಮದಿಂದಲೇ ಪ್ರಾಪ್ತವಾಗುತ್ತೆ ಎಂಬುವುದಾಗಿ ಹೇಳುತ್ತಾನೆ. ಕರ್ಮವೇ ಎಲ್ಲಕ್ಕೂ ಮೂಲ. ಮನುಷ್ಯನು ತನ್ನ ಗುಣಸ್ವಭಾವಗಳಿಗೆ ತಕ್ಕಂತೆ ಸ್ವಕರ್ಮನಿಷ್ಠನಾಗಿ ಗೌರವವನ್ನು ಪಡೆಯದೇಕೆಂದು ಹೇಳುವ ಸಮಯದಲ್ಲಿ "ಕರ್ಮೈವ ಗುರುರೀಶ್ವರಃ, ತಸ್ಮಾತ್ ಸಂಪೂಜಯೇತ್ ಕರ್ಮ ಸ್ವಭಾವಸ್ಥಃ ಸ್ವಕರ್ಮಕೃತ್" ಎಂಬುವುದಾಗಿ ತಿಳಿಸಿದ್ದಾನೆ. ನಾಲ್ಕು ವರ್ಣಗಳ ಧರ್ಮವನ್ನು ತಿಳಿಸುವ ಸಂದರ್ಭದಲ್ಲಿ ಶ್ರೀಕೃಷ್ಣನು "ವರ್ತೇತ, ಬ್ರಹ್ಮಣಾ ವಿಪ್ರೋ ರಾಜನ್ಯೋ ರಕ್ಷಯಾ ಭುವಃ, ವೈಶ್ಯಸ್ತು ವಾರ್ತಯಾ ಜೀವೇಚ್ಛೂದ್ರಸ್ತು ದ್ವಿಜಸೇವಯಾ"

ಬ್ರಾಹ್ಮಣರು ವೇದಾಧ್ಯಾಪನಾದಿಗಳಿಂದಲೂ, ಕ್ಷತ್ರಿಯನು ರಾಜ್ಯರಕ್ಷಣೆಯಲ್ಲಿ, ವೈಶ್ಯನು ವ್ಯಾಪಾರದಿಂದ ಶೂದ್ರನು ಸೇವಾವೃತ್ತಿಯಿಂದ ಜೀವನ ನಡೆಸಬೇಕೆಂದು ಹೇಳುತ್ತಾರೆ.

ಆಧುನಿಕ ಸಮಾಜದಲ್ಲೂ ಪ್ರತಿಯೊಬ್ಬ ಮನೆಯಲ್ಲೂ ಗುಣ ಕರ್ಮಗಳಿಗೆ ಅನುಗುಣವಾಗಿ ನಾಲ್ಕು ವರ್ಣದವರೂ ಇದ್ದಾರೆ. ಒಬ್ಬ ತಂದೆಗೆ ನಾಲ್ಕು ಜನ ಮಕ್ಕಳಲ್ಲಿ ಒಬ್ಬ ವೇದ ಪಂಡಿತ, ಇನ್ನೊಬ್ಬ ಸೇನೆಯಲ್ಲಿ ಮುಖ್ಯಾಧಿಕಾರಿ, ಮಗನೊಬ್ಬ ಅಂಗಡಿಯಿಟ್ಟುಕೊಂಡು ಜೀವನ. ಮಗದೊಬ್ಬ ನಾಲ್ಕು ಎಕರೆ ಜಮೀನಿನಲ್ಲಿ ತೆಂಗು, ಬಾಳೆ, ಬೆಳೆದು ನಾಲ್ಕು ಗೋವುಗಳನ್ನು ಮನೆಯಲ್ಲಿ ಸಾಕಿ ಜೀವನ, ಈ ಎಲ್ಲರೂ ಆ ಮನೆಯ ಆಧಾರಸ್ತಂಭಗಳು. ಹಾಗೆ ನಾಲ್ಕು ವರ್ಣಗಳೂ ಸಮಾಜದ ನಾಲ್ಕು ಮೆಟ್ಟಿಲುಗಳು, ಸೋಪಾನಗಳು, ಅಡಿಪಾಯಗಳು, ಮನುಸ್ಮೃತಿಯಲ್ಲೂ ಕೂಡ ವರ್ಣಗಳ ಬಗ್ಗೆ ಬರೆಯುತ್ತಾ ಮನುವು--

"ವಿಪ್ರಾಣಾಂ ಜ್ಞಾನತೋ, ಜ್ಯೈಷ್ಠಂ
ಕ್ಷತ್ರಿಯಾಣಾಂತು ವೀರ್ಯತಃ
ವೈಶ್ಯಾನಾಂ ಧಾನ್ಯ ಧನತಃ
ಶೂದ್ರಾಣಾ ಮೇವ ಜನ್ಮತಃ

(ಹುಟ್ಟಿದ ಜಾತಿಯಲ್ಲಿ ಅವರವರು ಪರಿಪೂರ್ಣರು. ಶ್ರೇಷ್ಠರು. ಬ್ರಾಹ್ಮಣ ಜ್ಞಾನದಲ್ಲಿ, ಕ್ಷತ್ರಿಯನು ಬಲದಲ್ಲಿ, ವೈಶ್ಯನು ಧನದಲ್ಲಿ, ಶೂದ್ರನು ಧಾನ್ಯದಲ್ಲಿ ಪರಿಪೂರ್ಣರು (ಜ್ಯೇಷ್ಠಂ) ಹೇಳಿದ್ದಾನೆ. ಹಾರೀತರು ಬ್ರಾಹ್ಮಣ ಧರ್ಮವನ್ನು ಹೀಗೆಂದು ವರ್ಣಿಸುತ್ತಾರೆ--

"ಧನ್ಯಂ ಯಶಸ್ಯಂ ಆಯುಷ್ಯಂ
ಸ್ವರ್ಗ್ಯಂ ಮೋಕ್ಷಫಲಪ್ರದಂ
ಬ್ರಾಹ್ಮಣ್ಯಂ ಬ್ರಹ್ಮಣೇನೈವ
ಉತ್ಪನ್ನೋ ಬ್ರಾಹ್ಮಣಃಸ್ಮೃತಃ
ಷಟ್ ಕರ್ಮಾಣಿ ನಿಜಾಣ್ಯಾಹುಃ
ಬ್ರಾಹ್ಮಣಸ್ಯ ಮಹಾತ್ಮನಃ
ತೈರೇವ ಸತತಂ ಯಸ್ತು
ವರ್ತಯೇತ್ ಸುಖಮೇಧತೇ
ಅಧ್ಯಾಪನಂ ಚ ಅಧ್ಯಯನಂ
ಯಾಜನಂ ಯಜನಂ ತಥಾ
ದಾನಂ ಪ್ರತಿಗ್ರಹಶ್ಚೇತಿ
ಷಟ್‌ಕರ್ಮಾಣೀತಿ ಚೋಚ್ಯತೇ

(ವೇದವನ್ನು ಹೇಳಿಕೊಡುವುದು, ಅಧ್ಯಯನ ಮಾಡುವುದು, ಯಜ್ಞವನ್ನು ಮಾಡುವುದು, ಮಾಡಿಸುವುದು, ದಾನಮಾಡುವುದು, ದಾನವನ್ನು ಸ್ವೀಕರಿಸುವುದು ಮುಂತಾದ ಆರು ಕರ್ಮಗಳು ಬ್ರಾಹ್ಮಣನಿಗೆ ಹೇಳಲ್ಪಟ್ಟಿದೆ. ಅಧ್ಯಾಪನವು ಮೂರು ವಿಧ. ಉಚಿತವಾಗಿ, ದ್ರವ್ಯಕ್ಕಾಗಿ, ಶಿಷ್ಯರಿಗಾಗಿ ಅಧ್ಯಾಪನವು ಹೇಳಲ್ಪಟ್ಟಿದೆ. ಯೋಗ್ಯರಾದ ಶಿಷ್ಯರಿಗೆ ವೇದವನ್ನು ಹೇಳಬೇಕು. ನಿಶ್ಚಲಚಿತ್ತನು, ಶುಚಿವಂತನು, ಶುದ್ಧ ಮನಸ್ಸುಳ್ಳವನು, ಆದ ಬ್ರಾಹ್ಮಣನಿಂದ ಧರ್ಮಶಾಸ್ತ್ರಗಳನ್ನು ಕಲಿಯಬೇಕು.

ಹಗಲು ರಾತ್ರಿ ಬ್ರಾಹ್ಮಣನು ವೇದವನ್ನು ಪಠನ ಮಾಡಬೇಕು, ಕೇಳಬೇಕು, ಇತರರಿಗೆ ಹೇಳಿಕೊಡಬೇಕು. ವೇದಗಳು, ಧರ್ಮಶಾಸ್ತ್ರಗಳು ಬ್ರಾಹ್ಮಣನಿಗೆ ಎರಡು ಕಣ್ಣುಗಳು. ಇವೆರಡರಲ್ಲಿ ಯಾವುದು ಒಂದು ಇಲ್ಲದಿದ್ದರೂ ಪ್ರಯೋಜನವಿಲ್ಲವೆಂದು ಹಾರೀತರ ಮತ. ಸೋಮಾರಿತನವಿಲ್ಲದೆ ದ್ವಿಜರು ಗುರುಗಳ ಶುಶ್ರೂಷೆ ಮಾಡಬೇಕು, ಸಾಯಂಪ್ರಾತಃಗಳಲ್ಲಿ ವಿವಾಹಾಗ್ನಿಯನ್ನು ಉಪಾಸನೆ ಮಾಡಬೇಕು. ಪ್ರತಿದಿನ ಸ್ನಾನಾನಂತರ ವೈಶ್ವದೇವನಿಗೆ ಬಲಿ. ಭಕ್ತಿಯಿಂದ ಅತಿಥಿಗಳ ಸತ್ಕಾರ ಮಾಡಬೇಕು. ಸ್ವದಾರ ನಿರತನಾಗಿ ಪರಸ್ತ್ರೀಯರ ವ್ಯಾಮೋಹವನ್ನು ಬಿಡಬೇಕು. ಬ್ರಾಹ್ಮಣ ಧರ್ಮವಿದು.

"ಕೃತಹೋಮಸ್ತು ಭುಂಜೀತ
ಸಾಯಂ ಪ್ರಾತರುದಾರಧೀಃ
ಸತ್ಯವಾದೀ ಜಿತ ಕ್ರೋಧೋ
ನಾಧರ್ಮೇ ವರ್ತಯೇನ್ ಮತಿಂ
ಸ್ವಕರ್ಮಣೇವ ಸಂಪ್ರಾಪ್ತೇ
ಪ್ರಮಾದಾನ್ನ ನಿವರ್ತತೇ
ಸತ್ಯಾಂ ಹಿತಂ ವದೇದ್ವಾಚಂ
ಪರಲೋಕ ಹಿತೈಷಿಣೀಂ
ಏಷ ಧರ್ಮಃ ಸಮಾದಿಷ್ಟೋ
ಬ್ರಾಹ್ಮಣಸ್ಯ ಸಮಾಸತಃ
ಧರ್ಮಮೇವ ಹಿಯಃ ಕುರ್ಯಾತ್
ಸಯಾತಿ ಬ್ರಹ್ಮಣಃ ಪದಂ

ಉದಾರ ಬುದ್ಧಿಯುಳ್ಳವನಾಗಿ ಸಾಯಂಕಾಲ ಪ್ರಾತಃಕಾಲಗಳಲ್ಲಿ ನಿಯಮಿತ ಹೋಮಾದಿ ಕರ್ಮಗಳನ್ನು ಮಾಡಿ ಭೋಜನಮಾಡಿ ಸತ್ಯವನ್ನು ಹೇಳುವಂತವನಾಗಿ ಜಿತಕ್ರೋಧನಾಗಿ ಅಧರ್ಮವನ್ನು ಬಿಟ್ಟು ತನ್ನ ಸ್ವಕರ್ಮಗಳನ್ನು ಎಷ್ಟೇ ಪ್ರಮಾದಗಳು ಬಂದರೂ ಬಿಡದೆ ಆಚರಿಸುತ್ತಾ ಪರಲೋಕಕ್ಕೆ ಸಾಧಕವಾದ ಸತ್ಯವನ್ನೇ ನುಡಿಯುತ್ತಾ ಹಿತವಾದ ಕೈಂಕರ್ಯವನ್ನು ಮನಸಾ ವಾಚಾ ಕೈಗೊಳ್ಳುವ ಧರ್ಮಗಳೇ ಬ್ರಾಹ್ಮಣನಿಗೆ ಹೇಳಲ್ಪಟ್ಟಿವೆ. ಇವುಗಳ ಅನುಷ್ಠಾನದಿಂದ ಪರಮಗತಿಯನ್ನು ಪಡೆಯಬಲ್ಲ ತತ್ವಜ್ಞಾನ ತನ್ನಿಷ್ಠನಾದ ಬ್ರಾಹ್ಮಣನು.

ಹಾರೀತಸ್ಮೃತಿಯ ದ್ವಿತೀಯಾಧ್ಯಾಯದಲ್ಲಿ ಕ್ಷತ್ರಿಯ ಧರ್ಮವನ್ನು ಹೇಳಲ್ಪಡುತ್ತದೆ.

"ರಾಜಸ್ಥಃ ಕ್ಷತ್ರಿಯಶ್ಚಾಪಿ
ಪ್ರಜಾಧರ್ಮೇಣ ಪಾಲಯನ್
ಕುರ್ಯಾತ್ ಅಧ್ಯಯನಂ ಸಮ್ಯಕ್
ಯಜೇತ್ ಯಜ್ಞಾನ್ ಯಥಾವಿಧಿ

ಕ್ಷತ್ರಿಯರು ರಾಜ್ಯಭಾರವನ್ನು ಮಾಡುವಾಗ ಪ್ರಜೆಗಳನ್ನು ಧರ್ಮದಿಂದ ಪಾಲಿಸಬೇಕು. ವೇದಾಧ್ಯಯನವನ್ನು ಚೆನ್ನಾಗಿ ಮಾಡಬೇಕು. ವಿಧಿವತ್ತಾಗಿ ಯಜ್ಞ ಯಾಗಾದಿ ಕರ್ಮಗಳನ್ನು ಲೋಕಹಿತಕ್ಕಾಗಿ ಆಚರಿಸಬೇಕು. ಮುಂದಿನ ಶ್ಲೋಕಗಳಲ್ಲಿ ಹಾರೀತರು ಕ್ಷತ್ರಿಯನು ಸ್ವಭಾವ ನಿರತನಾಗಿ ಧರ್ಮಬುದ್ಧಿಯಿಂದ ಕೂಡಿದವನಾಗಿ ಬ್ರಾಹ್ಮಣ ಸತ್ಪುರುಷರಿಗೆ ದಾನವನ್ನು ಮಾಡುತ್ತಾ, ಪ್ರಜೆಗಳಿಂದ ಕರಕಂದಾಯಗಳನ್ನು ವಸೂಲಿಮಾಡಿ, ನೀತಿ ಶಾಸ್ತ್ರ ಸಂಧಿವಿಗ್ರಹಗಳನ್ನು ಬಲ್ಲವನಾಗಿ ದೇವ ಬ್ರಾಹ್ಮಣರಲ್ಲಿ ಭಕ್ತಿಯುಳ್ಳವನಾಗಿ ತಮ್ಮ ಪಿತೃಕರ್ಮಗಳನ್ನೂ ಧರ್ಮದಲ್ಲಿ ಹೇಳಿರುವ ಯಾಗಗಳನ್ನು ಮಾಡುತ್ತಲಿದ್ದರೆ ಉತ್ತಮಗತಿಯನ್ನು ಪಡೆಯುತ್ತಾನೆ ಎಂಬುವುದಾಗಿ ಹೇಳುತ್ತಾರೆ. ವೈಶ್ಯನು ಗೋರಕ್ಷಣೆ, ಕೃಷಿ, ವಾಣಿಜ್ಯವನ್ನು ಶಾಸ್ತ್ರಪ್ರಕಾರ ಆಚರಿಸುತ್ತಾ ದಾನಧರ್ಮಗಳನ್ನು ಮಾಡಿ ಕಪಟ ಮೋಸಗಳಿಲ್ಲದೆ, ಸತ್ಯವಂತನಾಗಿ ಅನಸೂಯಕನಾಗಿ ತನ್ನ ಭಾರ್ಯೆಯಲ್ಲಿ ಮಾತ್ರ ಅನುರಕ್ತನಾಗಿ ಪಿತೃ, ಬ್ರಾಹ್ಮಣ, ದೇವರ ಕಾರ್ಯಗಳಲ್ಲಿ ಭಕ್ತಿಯುಳ್ಳವನಾಗಿದ್ದರೆ ಸ್ವರ್ಗಪ್ರಾಪ್ತಿಯಾಗುತ್ತೆ. ಶೂದ್ರರು ಸೇವೆ, ಮನೋಭಾವದಿಂದ ಕೃಷಿಯಲ್ಲಿ ನಿರತರಾಗಿ, ಪ್ರಯತ್ನಪೂರ್ವಕವಾಗಿ ದಾನ್ಯವನ್ನು ಮಾಡುವಂತಹವರಾಗಿ ಸೋಮಾರಿತನವಿಲ್ಲದೆ ದೀನರ, ಸಂತರ ಶುಶ್ರೂಷಣೆಯಲ್ಲಿ ನಿರತರಾಗಿರಬೇಕು. ಅಂತಹ ಶೂದ್ರರನ್ನು ಎಲ್ಲರೂ ವಿಶೇಷವಾಗಿ, ಮರ್ಯಾದೆಯಿಂದ ನೋಡಬೇಕು. "ಶೂದ್ರಾಣಾಂ ಅಧಿಕಂ ಕುರ್ಯಾತ್ ಅರ್ಚನಂ ನ್ಯಾಯವರ್ತಿಣಾಂ" ಅಂತಹ ಶೂದ್ರರು "ಸ್ವದಾರೇಷು ರತಿಂ ಚೈವ -- ಪರದಾರ ವಿವರ್ಜನಂ -- ಪುರಾಣ ಶ್ರವಣಂ ವಿಪ್ರಾತ್ -- ನರಸಿಂಹಾಭಿಪೂಜನಂ" ತನ್ನ ಹೆಂಡತಿಯಯೊಡನೆ ಪ್ರೀತಿ. ಪರನಾರಿಯರನ್ನು ಕಣ್ಣೆತ್ತಿ ನೋಡದಿರುವಿಕೆ. ಬ್ರಾಹ್ಮಣರಿಂದ ಪುರಾಣ ಶ್ರವಣ ಹಾಗೂ ವಿಷ್ಣು ಪೂಜೆ ಇವರ ಧರ್ಮ. ಪಶುಸ್ಪರ್ಶೋ ದಿನೇ ದಿನೇ (ಪಶು ಗಳನ್ನು ಪಾಲಿಸುವುದು) ರಾಗದ್ವೇಷಗಳಿಂದ ಬಿಡಲ್ಪಟ್ಟ ಶೂದ್ರರು ನಷ್ಟಪಾಪಃ -- ಸುಪುಣ್ಯಕೃತ್ -- ಐಂದ್ರಂ ಸ್ಥಾನಂ ಆಪ್ನೋತಿ ಎಂಬುವುದಾಗಿ ಹೊಗಳಿದ್ದಾರೆ. ತೃತೀಯ ಅಧ್ಯಾಯದಲ್ಲಿ ಬ್ರಹ್ಮಚಾರಿಯ ನಿಯಮ

ಗಳನ್ನು ಹೇಳುವಾಗ ಉಪನೀತನಾದ ಬ್ರಹ್ಮಚಾರಿ ಗುರುಕುಲದಲ್ಲಿ ವಾಸಮಾಡಿ, ಕರ್ಮಣಾ, ಮನಸಾ, ವಾಚಾ ಗುರು ಶುಶ್ರೂಷೆ ಮಾಡಬೇಕು ಎಂಬುವುದಾಗಿ ಹೇಳಲ್ಪಡುತ್ತದೆ. ಬ್ರಹ್ಮಚಾರಿ, ಭೂಮಿಯಲ್ಲಿ ಮಲಗಬೇಕು. ಅಗ್ನಿ ಉಪಾಸನೆ, ವೇದಾಧ್ಯಯನ, ಗುರುವಿಗೆ ಸಹಾಯ ಮಾಡುವಿಕೆ, ಸ್ಥಿರ ಚಿತ್ತನಾಗಿ, ಇಂದ್ರಿಯ ನಿಗ್ರಹದಿಂದ ಸಾಯಂಪ್ರಾತಃ ಕಾಲದಲ್ಲಿ ಶಾಸ್ತ್ರಗಳ ಪಠಣ ಮಾಡಬೇಕೆಂದು ತಿಳಿಸುತ್ತೆ. ಆಚಾರ್ಯ ಲಕ್ಷಣಗಳನ್ನು ಹೇಳುವಾಗ ಯಸ್ಯ ಜಿಹ್ವಾ, ಉಪಸ್ಥಃ, ಉದರಂ, ಕರಃ ಏತಾನಿ ಸುಗುಪ್ತಾನಿ-ದೋಷರಹಿತನಾದ ಆಚಾರ್ಯನಲ್ಲಿ ಮಾತ್ರ ಶಿಷ್ಯನು ಅಧ್ಯಯನ ಮಾಡಬೇಕೆಂದು ಹಾರೀತರು ಸೂಚಿಸುತ್ತಾರೆ. ನಾಲ್ಕನೆಯ ಅಧ್ಯಾಯದಲ್ಲಿ ಅನೇಕ ವಿವಾಹಗಳನ್ನು ತಿಳಿಸುತ್ತಾರೆ. ಮತ್ತೆ, ಮುಖ ಪ್ರಕ್ಷಾಳನ, ದಂತಧಾವನ, ದಂತಕಾಷ್ಠ, ಸ್ನಾನ, ಅರ್ಘ್ಯ ಆಚಮನ, ಸಂಧ್ಯಾವಂದನ, ನದೀಸ್ನಾನ, ವಸ್ತ್ರಧಾರಣ, ವಸ್ತ್ರ ನಿಷಿದ್ಧ, ಪ್ರಾಣಾಯಾಮ, ಗಾಯತ್ರೀ ಮಂತ್ರ, ಮಾನಸಯಜ್ಞ, ಜಪಯಜ್ಞ, ಜಪವಿಧಿ, ಜಪಗಳ ಫಲ, ನಿತ್ಯನೈಮಿತ್ತಿಕ ಕರ್ಮಗಳ ನಿಯಮಗಳು ಮುಂತಾದ ಅನೇಕ ಧರ್ಮಗಳನ್ನು ವಿವರಿಸುತ್ತಾರೆ. ಗೃಹಸ್ಥನಿಗೆ ಅತಿಥಿ ಸತ್ಕಾರಕ್ಕಿಂತ ಮಿಗಿಲಾದ ಧರ್ಮವಿಲ್ಲವೆಂದು ಹೇಳುವಾಗ ಹಾರೀತರು :-- ಮನೆಗೆ ಬಂದಂತ ಅಥಿತಿಗೆ ಸ್ವಾಗತ, ಆಸನ, ಅರ್ಘ್ಯಗಳನ್ನು ನೀಡಿ ಉಪಚರಿಸಿದರೆ ಸಂಪತ್ತು ಕ್ಷೀಣವಾಗುವುದಕ್ಕೆ ಬದಲಾಗಿ ವೃದ್ಧಿಹೊಂದಿ ನೆಲೆಯಾಗಿ ನಿಲ್ಲುತ್ತದೆ. ಸಂಪತ್ತಿಗೆ ಅತಿಥಿ ಸತ್ಕಾರವೇ ತಕ್ಕ ಪ್ರಯೋಜನ. ದೇವತೆಗಳೂ ಪ್ರಸನ್ನರಾಗುತ್ತಾರೆ ಎಂಬುವುದಾಗಿ ಘೋಷಿಸಿದ್ದಾರೆ.

೧) ಸ್ವಾಗತೇನ ಗೃಹಮೇಧಿನಃ ಅಗ್ನಯಃ ತುಷ್ಟಾಃ ಭವಂತಿ (ಕುಶಲ ಪ್ರಶ್ನೆಯಿಂದ ಗೃಹಸ್ಥನ ತ್ರೇತಾಗ್ನಿಗಳು ಸಂತುಷ್ಟರಾಗುತ್ತಾರೆ.)

೨) ದತ್ತೇನ ಆಸನೇನತು ದೇವರಾಟ್ ಪ್ರೀತಃ ಭವತಿ (ಆಸನ ನೀಡುವುದರಿಂದ ಇಂದ್ರನು ಪ್ರಸನ್ನನಾಗುತ್ತಾನೆ.)

೩) ಪಾದಶೌಚೇನ ಪಿತರಃ--ದುರ್ಲಭಾಂ ಪ್ರೀತಿಂ ಆಯಾಂತಿ (ಪಾದ ಪ್ರಕ್ಷಾಳಗಳಿಂದ ಪಿತೃದೇವತೆಗಳು ಪ್ರೀತಿಯನ್ನು ಹೊಂದುವರು.)

೪) ಅನ್ನದಾನೇನ ಪ್ರಜಾಪತಿಃ ತೃಪ್ಯತೇಹಿ (ಅನ್ನದಾನದಿಂದ ಬ್ರಹ್ಮನು ತೃಪ್ತಿಹೊಂದುವನು. ಇಂತಹ ಮಹತ್ತರ ಫಲಗಳು ಅತಿಥಿ ಸತ್ಕಾರದಿಂದ ಮಾನವನು ಹೊಂದುಬಹುದು.)

ಮುಂದಿನ ಅಧ್ಯಾಯಗಳಲ್ಲಿ ಯತಿಗಳಿಗೆ ಅನ್ನ ನೀಡುವುದರ ಫಲ. ಬಾಲ ವೃದ್ಧರಿಗೆ ಅನ್ನ ನೀಡುವುದರ ಫಲ, ಭೋಜನವಿಧಿ, ಅಧ್ಯಯನ, ಅನಧ್ಯಯನ, ಪಠಣ ನಿಷಿದ್ಧಕಾಲಗಳು ವಿವರಿಸಿ, ವಾನಪ್ರಸ್ಥ ಧರ್ಮವಿಧಿ, ನಿಯಮಗಳನ್ನು ವಿವರಿಸುತ್ತಾರೆ. ಸನ್ಯಾಸ ಧರ್ಮಗಳ ವಿವರಣೆಗಳೂ ಕೂಡ ಇಲ್ಲಿ ಇವೆ. ತರುವಾಯ ಯೋಗಶಾಸ್ತ್ರವಿಚಾರ. ಅಲ್ಲಿ ಧ್ಯಾನ ಪ್ರಾಣಾಯಾಮ. ಜ್ಞಾನ ಕರ್ಮಗಳ ಮಹಿಮೆ ಹೇಳಿ--

"ಧರ್ಮಶಾಸ್ತ್ರ ಮಿದಂ ಪುಣ್ಯಂ
ಹಾರೀತ ಮುಖನಿಃಸೃತಂ
ಅಧೀತ್ಯ ಕುರುತೇ ಧರ್ಮಂ
ಸಯಾತಿ ಪರಮಾಂ ಗತಿಂ"

ಸನಾತನವಾದ ಈ ಧರ್ಮಶಾಸ್ತ್ರಗಳನ್ನು ಓದಿ ಅದರಂತೆ ನಡೆಯುವವನು ಶ್ರೇಷ್ಠವಾದ ಗತಿಯನ್ನು ಹೊಂದುತ್ತಾನೆ ಎಂಬುವುದಾಗಿ ಮುಗಿಸುತ್ತಾರೆ. ವರ್ಣಾಶ್ರಮಸ್ಥಾರೋ ಸ್ವಧರ್ಮಂ -- ಯೇನುಷ್ಠಂತಿ ತೇಯಾಂತಿ -- ಪರಮಾಂಗತಿಂ -- ಎಂಬುವುದಾಗಿಯೂ, "ಉತ್ಪನ್ನ ವೈರಾಗ್ಯ ಬಲೇನ ಯೋಗೀ ಧ್ಯಾಯೇತ್ ಪರಂ ಬ್ರಹ್ಮಸದಾಕ್ರಿಯಾನ್, ಸತ್ಯಂ ಸುಖಂ ರೂಪಂ ಅನಂತಮಾದ್ಯಂ ವಿಹಾಯ ದೇಹಂ ಪದಮೇತಿ ವಿಷ್ಣೋಃ" ಎಂಬುವುದಾಗಿ ಯೋಗಿಯನ್ನು ಕುರಿತೂ, ನಾಲ್ಕುವರ್ಣದವರು ತಮ್ಮತಮ್ಮಧರ್ಮಗಳಲ್ಲಿ ನಿರತರಾಗಿದ್ದರೆ ಪರಮಗತಿಯನ್ನು ಹೊಂದುತ್ತಾರೆಂಬುವುದಾಗಿ ತಿಳಿಸಿದ್ದಾರೆ. ಹಾರೀತರನ್ನು ಆಪಸ್ತಂಭ, ವಶಿಷ್ಠರು ತಮ್ಮ ಧರ್ಮಶಾಸ್ತ್ರಗಳಲ್ಲಿ ಉಲ್ಲೇಖಿಸಿದ್ದಾರೆ. ಹಾರೀತ ಧರ್ಮಶಾಸ್ತ್ರವು ಕಾಶ್ಮೀರದಲ್ಲಿ ಹೆಚ್ಚಿಗೆ ಪ್ರಚಾರದಲ್ಲಿತ್ತೆಂದು ತಿಳಿದುಬರುತ್ತದೆ. ೧೮೮೯ ರಲ್ಲಿ ಬ್ರಹ್ಮಶ್ರೀ ವಾವಿಳ್ಳ ರಾಮಸ್ವಾಮಿ ಶಾಸ್ತ್ರಿಗಳಿಂದ ತೆಲುಗಿನಲ್ಲಿ ಚೆನ್ನಪುರಿಯಲ್ಲಿ ಮುದ್ರಿತವಾಗಿರುವ ಹಾರೀತ ಧರ್ಮಶಾಸ್ತ್ರದಲ್ಲಿ ಕೇವಲ ಏಳು ಅಧ್ಯಾಯಗಳು ಮಾತ್ರ ಇವೆ. ಆದರೆ ಎಲ್ಲಾ ಧರ್ಮಸೂತ್ರಗಳಲ್ಲಿ ಹಾರೀತರ ಅನೇಕ ಪ್ರಮಾಣ ಶ್ಲೋಕಗಳನ್ನು ಪ್ರಸ್ತಾಪಿಸುತ್ತಾರೆ. "ಲಘು ಹಾರೀತಸ್ಮೃತಿ ಹಾಗೂ ವೃದ್ಧ ಹಾರೀತ ಸ್ಮೃತಿಗಳಿವೆ" ಎಂಬುವುದಾಗಿ ಪಾಂಡುರಂಗ ವಾಮನಕಾಣೆಯವರು ತಿಳಿಸಿದ್ದಾರೆ. ಹಾರೀತ ಧರ್ಮಶಾಸ್ತ್ರಗಳಲ್ಲಿ ಗೃಹಸ್ಥನಾಗಿ ಬಾಳಿ, ಮಿಕ್ಕ ಬ್ರಹ್ಮಚಾರಿ, ವಾನಪ್ರಸ್ಥ ಮತ್ತು ಸನ್ಯಾಸಿಗೆ ಸಹಾಯಕನಾಗಿ ಬಾಳುವುದೇ ಶ್ರೇಷ್ಠ ಧರ್ಮವೆಂದು ತಿಳಿಸಿದ್ದಾರೆ. ವೃದ್ಧರಿಗೆ ಬಾಲಕರಿಗೆ ಅನಾಥರಿಗೆ ಗೃಹಸ್ಥನು ಪೋಷಕನಾಗಿ ಅತಿಥಿಗಳಿಗೆ ಅನ್ನದಾತನಾಗಿ ಬಾಳುವ ಬಾಳ್ವೆ ಸಾರ್ಥಕವೆಂದು ಪ್ರತಿಪಾದಿಸಿದ್ದಾರೆ. ಅತಿಥಿಸತ್ಕಾರವೂ ಪಂಚ ಮಹಾಯಜ್ಞಗಳಲ್ಲಿ ಒಂದಾಗಿದೆ. ಅತಿಥಿ ಸತ್ಕಾರದ ಮಹತ್ತರ ಫಲ ಹಾರೀತರಂತೆ ಬೇರೆ ಯಾವ ಸ್ಮೃತಿಕಾರನೂ ಎತ್ತಿಹೇಳಿಲ್ಲ. ಯಾಜ್ಞವಲ್ಕರು ಲೋಕದ ವಿದ್ಯೆಗಳನ್ನು ವಿವರಿಸುವಾಗ "ಅಂಗಾನಿ ವೇದಾಶ್ಚತ್ವಾರೋ ಮೀಮಾಂಸಾನ್ಯಾಯ ವಿಸ್ತರಃ ಪುರಾಣಂ ಧರ್ಮಶಾಸ್ತ್ರಂ ಚ ವಿದ್ಯಾಹ್ಯೇತಾಶ್ಚತುರ್ದಶ" ಧರ್ಮಶಾಸ್ತ್ರವೂ ಕೂಡಿ ಹದಿನಾಲ್ಕು ವಿದ್ಯೆಗಳು ಮಾನವನಿಗೆ ತತ್ತ್ವಹಿತ. ಪುರುಷಾರ್ಥ ಮೋಕ್ಷಗಳನ್ನು ನೀಡುತ್ತವೆ ಎಂದು ಸಾರಿದ್ದಾರೆ. ಆಧುನಿಕ ಮಾನವನಿಗೆ ಧರ್ಮಶಾಸ್ತ್ರಗಳ ಜ್ಞಾನದೀಪ ಅತ್ಯವಶ್ಯಕವಾಗಿದೆ.

-- ಧರ್ಮೋ ರಕ್ಷತಿ ರಕ್ಷಿತಃ



## ತಿರುಪತಿಯಲ್ಲಿ ವಸತಿಗಾಗಿ ಸೂಚನೆ

ತಿರುಪತಿಯಲ್ಲಿ ವಸತಿಗಾಗಿ ಮುಂಗಡ ಕಾಯ್ದಿರಿಸುವಿಕೆಗಾಗಿ ಯಾತ್ರಿಕರು ಹಣವನ್ನು ಎಂ.ಓ. ಮೂಲಕ ಕಳುಹಿಸುವುದನ್ನು ಸ್ವೀಕರಿಸಲಾಗುವುದಿಲ್ಲ. ಅಸಿಸ್ಟೆಂಟ್ ಎಕ್ಸಿಕ್ಯೂಟಿವ್ ಆಫೀಸರ್ (ರಿಸೆಪ್ಷನ್) ತಿ.ತಿ.ದೇ. ತಿರುಪತಿ ಅಥವಾ ಎಕ್ಸಿಕ್ಯೂಟಿವ್ ಆಫೀಸರ್ ತಿ.ತಿ.ದೇ. ತಿರುಪತಿ ಇವರ ಹೆಸರಿನಲ್ಲಿ ಡಿ.ಡಿ. ಯನ್ನು ಕಳುಹಿಸಬೇಕು. ಡಿ.ಡಿ. ಯ ಜೊತೆಗೆ ಬರುವ ದಿನಾಂಕ, ಬರುವವರ ಸಂಖ್ಯೆ, ತಿರುಪತಿಯಲ್ಲಿ ವಸತಿಯನ್ನು ಕಾಯ್ದಿರಿಸಬೇಕಾದ ದಿನಾಂಕಗಳನ್ನು ಬರೆದು ಕಳುಹಿಸಬೇಕು.

**ಅಸಿಸ್ಟೆಂಟ್ ಎಕ್ಸಿಕ್ಯೂಟಿವ್ ಆಫೀಸರ್,**
(ರಿಸೆಪ್ಷನ್) ತಿ.ತಿ.ದೇ. ತಿರುಪತಿ.

ಪ್ರಾಚೀನ ಭಾರತದಲ್ಲಿ ಪ್ರತಿಯೊಬ್ಬ ಸಂಸ್ಕೃತ ಪ್ರೇಮಿಯೂ ಯಾವುದೇ ಭೇದ ಭಾವವನ್ನೆಣಿಸದೆ ತಮ್ಮ ಸಂತಾನರಿಗೆ ಮೊದಲು ಅಮರಕೋಶವನ್ನು ಹೇಳಿಕೊಡುತ್ತಿದ್ದರು. ಯಾರಿಗೆ ಈ ಗ್ರಂಥವು ಮುಖೋದ್ಗತವಾಗುತ್ತಿತ್ತೋ ಅಂಥವರಿಗೆ ಮುಂದೆ ವ್ಯಾಕರಣ ಕಾವ್ಯ ಗ್ರಂಥಗಳಿಗೆ ಲೀಲಾಜಾಲವಾಗಿ ಪ್ರವೇಶವು ದೊರೆಯುತ್ತಿತ್ತು. ತಮ್ಮ ಮಕ್ಕಳನ್ನು ನಸುಕಿನ ಜಾವದಲ್ಲೆಬ್ಬಿಸಿ ನಸುಕಿನಲ್ಲಿಯೇ ಒಂದೊಂದೇ ಶ್ಲೋಕಗಳನ್ನು ಕಂಠಪಾಠ ಮಾಡಿಸುವ ಕ್ರಮವಿತ್ತು.

ಕಾಲಾಂತರದಲ್ಲಿ ಈ ಕೋಶದ ಲೋಪದೋಷಗಳನ್ನಭ್ಯಾಸಮಾಡಿ ಮಹೇಶ್ವರಿ ಅಮರವಿವೇಕ ಎಂಬ ಟೀಕಾ ಗ್ರಂಥವು ಹೊರಬರುವಂತಾಯಿತು. ಇ.ಸ. ೧೮೮೨ ರಲ್ಲಿ ಚಿಂತಾಮಣಿ ಶಾಸ್ತ್ರಿಧತ್ತೆ ಎಂಬುವವರ ಗ್ರಂಥವನ್ನು ಕಂಡು ಹಿಡಿದರು. ಮುಂದೆ ಕರ್ನಾಟಕ ರಾಜ್ಯದ ವಿಜಾಪುರ ಜಿಲ್ಲೆಗೆ ಸೇರಿದ ಝುಳಕಿ ಗ್ರಾಮ ನಿವಾಸಿಗಳಾಗಿದ್ದ ವಾಮನಾಚಾರ್ಯರೆಂಬ ಪಂಡಿತರು ಡಾ. ರಾ. ಗೋ. ಭಂಡಾರಕರ ಇವರ ಹಿರಿತನದಲ್ಲಿ ಇ.ಸ. ೧೮೯೦ ರಲ್ಲಿ ಅಮರವಿವೇಕ ಗ್ರಂಥಕ್ಕೆ ಟಿಪ್ಪಣಿಯನ್ನು ರಚಿಸಿದರು. ಈ ಗ್ರಂಥವನ್ನು ಅಂದಿನ ಸರಕಾರವು ಮುದ್ರಿಸಿತು. ವಾಮನಾಚಾರ್ಯರು ಮಹೇಶ್ವರ ಅಮರವಿವೇಕ ಗ್ರಂಥದಲ್ಲಿಯ ಶಬ್ದಗಳ ವಿವಿಧಾರ್ಥಗಳನ್ನು ಕುರಿತು ವಿವೇಚನೆ ಮಾಡಿರುವುದುಂಟು. ಈ ಕಾರ್ಯಕ್ಕಾಗಿ ಶ್ರೀ ಯಳಕಿಯವರು ವಿವಿಧ ಪ್ರಕಾರಗಳಲ್ಲಿರುವ ಎಂಬತ್ತು ಕೋಶಗಳನ್ನಭ್ಯಾಸ ಮಾಡಿದುದಾಗಿ ಹೇಳಿಕೊಂಡಿದ್ದಾರೆ.

ಗೋಮಾಂತಕದಲ್ಲಿರುವ ಕುಂಬಾರಜುವ್ವಾ ಎಂಬುದರ ಸಮೀಪದಲ್ಲಿರುವ ಮಹಾಶಾಲ ಎಂಬ ಹೆಸರಿನ ಪುಟ್ಟ ಗ್ರಾಮದಲ್ಲಿ ವಾಸವಾಗಿದ್ದ ರಾಮಚಂದ್ರ ಭಟ್ಟ ಹಾಗೂ ಜಾನಕೀಬಾಯಿ ಎಂಬ ಹೆಸರಿನ ಕೌಶಿಕ ಗೋತ್ರದ ಕುಟುಂಬವಿತ್ತು. ಇವರು ಪೌರೋಹಿತ್ಯದಿಂದ ಜೀನವವನ್ನು ಸಾಗಿಸುತ್ತಿದ್ದರು. ಮಹೇಶ್ವರಭಟ್ಟ ಈ ದಂಪತಿಗಳ ಅಚ್ಚುಮೆಚ್ಚಿನ ಮಗನಾಗಿದ್ದ. ರಾಮಚಂದ್ರ ಭಟ್ಟರು ಬಾಲ್ಯದಲ್ಲಿಯೇ ಈತನಿಗೆ ಅಮರಕೋಶ, ಶಬ್ದಸಮಾಸ, ಹಾಗೂ ವೇದ ಮಂತ್ರಗಳನ್ನು ಹೇಳಿಕೊಟ್ಟರು. ಮುಂದೆ ಉಪನಯನಾನಂತರ ವೇದಾರ್ಥಗಳನ್ನು ಕುರಿತು ಅಭ್ಯಾಸವು ಆರಂಭವಾಯಿತು. ಆಗಾಗ ಮಹೇಶ್ವರನು ಅಮರಕೋಶದ ಶಬ್ದಗಳನ್ನು ಕುರಿತು ಶುದ್ಧಾಶುದ್ಧತೆಯ ಅಭ್ಯಾಸಕ್ಕಾಗಿ ಟಿಪ್ಪಣಿ ಮಾಡಿಕೊಳ್ಳತೊಡಗಿದನು. ಅಮರಕೋಶದಲ್ಲಿ ಅನೇಕ ನ್ಯೂನತೆಗಳನ್ನು ಕಂಡುಕೊಂಡನು. ಅದನ್ನು ದೃಢೀಕರಿಸಿಕೊಳ್ಳಲು ಸಂಸ್ಕೃತದಲ್ಲಿಯ ಬೇರೆ ಬೇರೆ ಕೋಶಗಳನ್ನು ಅಭ್ಯಾಸ ಮಾಡ

## ಗೋಮಾಂತಕದ ಮಹೇಶ್ವರಭಟ್ಟ ---ಆದ್ಯ ರಾಮಾಚಾರ್ಯ.

ತೊಡಗಿದನು. ಬಹು ಪರಿಶ್ರಮದಿಂದ ಮುಂದೆ "ವಿಶ್ವಪ್ರಕಾಶ" ಎಂಬ ಅನೇಕಾರ್ಥಗಳನ್ನೊದಗಿಸುವಂತಹ ಕೃತಿಯನ್ನು ನಿರ್ಮಾಣ ಮಾಡಿದನು. ಪೂರ್ವೋತ್ತರ ಭಾರತದಲ್ಲಿ ಇಂದಿಗೂ ಈ ಕೋಶವು ಬಹು ಜನಪ್ರಿಯವಾಗಿರುವುದು. ಇದಲ್ಲದೇ ದ್ವಿರೂಪಕೋಶ ಹಾಗೂ ಏಕಾಕ್ಷರೀಕೋಶ ಎಂಬ ಬೇರೆರಡು ಕೃತಿಗಳನ್ನೂ ಸಹ ಮಹೇಶ್ವರಭಟ್ಟನು ನಿರ್ಮಿಸಿರುವುದುಂಟು. ತನ್ನ ಮೂವತ್ತೆರಡನೇ ವರುಷದಲ್ಲಿ ಈ ಕೃತಿಗಳನ್ನು ರಚಿಸಿರುವುದಾಗಿ ಹೇಳಿಕೊಂಡಿದ್ದಾನೆ.

ಶ್ರೀ ಸಪ್ತಶತಿಯ ಮಂತ್ರಮಯ ಗುಪ್ತಾವಲಿ ಹಾಗೂ ಶಿವನಾಮ ಕಲ್ಪಲತಾ ಮೊದಲಾದ ಗ್ರಂಥಗಳನ್ನು ರಚಿಸಿದ್ದಾನೆ. ಅಂದು ಗೋಮಾಂತಕ ಪ್ರದೇಶಕ್ಕೆ ಆಗಮಿಸಿ ಶಾಂತಾದುರ್ಗಾ ದೇವಿಯ ಉಪಾಸನೆಯಲ್ಲಿ ನಿರತನಾಗಿದ್ದ ಭಾಸ್ಕರರಾಯನು ನಾರ್ವೆ ಎಂಬಲ್ಲಿ ವಾಸ ಮಾಡಿಕೊಂಡಿದ್ದನು. ಆತನು ಹೆಚ್ಚಾಗಿ ಶ್ರೀ ಸಪ್ತಕೋಟೀಶ್ವರ ದೇವನ ಸನ್ನಿಧಿಯಲ್ಲಿಯೇ ಇರುತ್ತಿದ್ದನು. ಮಹೇಶ್ವರಭಟ್ಟ ಹಾಗೂ ಭಾಸ್ಕರರಾಯರು ಆಗಾಗ ಭೇಟಿಯಾಗುತ್ತಿದ್ದರೆಂದು ತಿಳಿದು ಬರುವುದು. ಈ ಭಾಸ್ಕರರಾಯನು ಮೂಲತಃ ವಿಜಾಪುರದವನು. ಈತನ ತಂದೆಯ ಹೆಸರು ಗಂಭೀರರಾಯನೆಂದಿದ್ದು ವಿಜಾಪುರ ದರ್ಬಾರದಲ್ಲಿ ಪ್ರತಿಷ್ಠಿತ ಸ್ಥಾನದಲ್ಲಿದ್ದನು. ಭಾಸ್ಕರರಾಯನು ತನ್ನ "ಗುಪ್ತವತಿ" ಎಂಬ ಗ್ರಂಥವನ್ನು ಮಹೇಶ್ವರ ಭಟ್ಟನೊಂದಿಗೆ ಚರ್ಚೆ ಮಾಡಿದ ನಂತರವೇ ಬರೆದನೆಂದು ತಿಳಿದುಬರುವುದು.

ಮಹೇಶ್ವರ ಭಟ್ಟನಿಗೆ ಮಂತ್ರ ತಂತ್ರಗಳಲ್ಲಿ ಅಗಾಧವಾದ ಜ್ಞಾನವಿತ್ತು. ಅಲ್ಲದೇ ದೇವೀ ಉಪಾಸನೆಯಿಂದ ಸಕಲ ಶಾಸ್ತ್ರ ಗ್ರಂಥಗಳನ್ನು ಚೆನ್ನಾಗಿ ಅಭ್ಯಾಸ ಮಾಡಿದ್ದನು. ಶ್ರೀಮದ್ಭಾಗವತ ಗ್ರಂಥಕ್ಕೆ ಶ್ರೀಧರಿ ಟೀಕಾ ಎಂಬ ಕೃತಿಯ ವಿಮರ್ಶೆಯನ್ನು ಈತನು ತನ್ನ ಎಂಭತ್ತೆರಡನೇ ವಯಸ್ಸಿನಲ್ಲಿ ಬರೆದು ಮುಗಿಸಿರುವುದಾಗಿ ತಿಳಿದು ಬರುವುದು. ಮಹಾವಿದ್ವಾಂಸನಾದ ಈತನು ಚಾರಿತ್ರ್ಯ ಸಂಪನ್ನನಾಗಿದ್ದನು. ಧರ್ಮದೀಕ್ಷಾಪರನಾಗಿದ್ದನು. ಈಶ್ವರನಲ್ಲಿ ಅಪಾರ ವಿಶ್ವಾಸವನ್ನಿಟ್ಟುಕೊಂಡಿದ್ದನು. ನಿಗರ್ವಿಯಾಗಿದ್ದನು, ಗೋಮಾಂತಕದ ಪ್ರಜೆಗಳು ಈತನನ್ನು "ಬಾಬಾ" ಎಂದು ಬಹು ಗೌರವದಿಂದ ಕಾಣುತ್ತಿದ್ದರು. ಈ ಮಹಾ ಪಂಡಿತನು ತನ್ನ ವಯಸ್ಸಿನ ೯೮ ನೇ ವರುಷದಲ್ಲಿ ಅಂದರೆ ಇ.ಸ. ೧೮೧೬ ರಲ್ಲಿ ಮರಣ ಹೊಂದಿದನೆಂದು ತಿಳಿದುಬರುವುದು.

## ಮಹೇಶ್ವರ ಭಟ್ಟನ ಗ್ರಂಥಗಳ ವಿವರ

೧. ಸ್ವಾತ್ಮನಿರೂಪಣಾ -- ಇದಕ್ಕೆ ಸ್ವಾತ್ಮಾತ್ಮ ದೀಪಿಕಾ ಎಂಬ ಟೀಕೆ.

೨. ಭಗವದ್ಗೀತಾ, ಅದ್ವೈತ ಮಕರಂದ, ವಾಕ್ಯ ಸುಧಾ ಸಿದ್ಧಾಂತ ಚಂದ್ರಿಕಾ --ಮೊದಲಾದ ಕೃತಿಗಳಿಗೆ ಬಹು ಗಾಂಭೀರ್ಯಯುಕ್ತವಾದ ಗದ್ಯಪದ್ಯಮಯ ಟೀಕಾ, ಅದರಲ್ಲಿಯೂ ವಿಶೇಷವಾಗಿ ವಾಕ್ಯ ಸುಧಾ ಎಂಬ ಕೃತಿಗೆ ಪಾನಪಾತ್ರ ಎಂಬ ಹೆಸರಿನ ಸಮಶ್ಲೋಕೀ ಟೀಕಾಗ್ರಂಥವಿದೆ. ಅದಕ್ಕೆ ವಿಸ್ತೃತವಾದ ವ್ಯಾಖ್ಯಾನವೂ ಇದೆ.

೩. ಗೀತಗೋವಿಂದ ಕೃತಿಗೆ ಪದ್ಯಾತ್ಮಕ ಪ್ರಾಕೃತ ಟೀಕಾ

೪. ಮೋರೋ ಪಂತರ ಮಂತ್ರ ಭಾಗವತಕ್ಕೆ ಸಂತೋಷಿಣಿ ಎಂಬ ಹೆಸರಿನ ಸಂಸ್ಕೃತ ಟೀಕಾ.

೫. ಭಾನುಶತಕ ಎಂಬ ಗಂಭೀರ ಕಾವ್ಯ ಕೃತಿ ರಚನೆ.

೬. ಮುದ್ಗಲಾಚಾರ್ಯರಿಂದ ರಚಿತವಾದ ಗ್ರಂಥಕ್ಕೆ ಪರಮಾರ್ಥದರ್ಶಿಕಾ ಎಂಬ ಟೀಕಾ.

೭. ಶಂಕರಾಚಾರ್ಯ ವಿರಚಿತ ಮನೀಷಾ ಪಂಚಕ ಹಾಗೂ ಷಟ್‌ಪದಿಗಳಿಗೆ ಟೀಕಾ.

೮. ಧರ್ಮಶಾಸ್ತ್ರ ಕುರಿತು ತ್ರೀಂಶತ್ ಶ್ಲೋಕ, ಚತುಃಶ್ಲೋಕ ಹಾಗೂ ನಿರ್ಣಯ ಸಿಂಧು ಗ್ರಂಥದಲ್ಲಿಯ ಸಪಿಂಡಿಕಾನಿರ್ಣಯ ಹಾಗೂ ಪಂಚಕಗಳ ವಿವರಣೆ.

೯. ಕೇಶವಮಿಶ್ರ ಕೃತ ತರ್ಕಭಾಷಾನಾಮಕ ನ್ಯಾಯ ಗ್ರಂಥಕ್ಕೆ ವ್ಯಾಖ್ಯಾನ.

### ಇನ್ನು ಸ್ವಂತದ ಕೃತಿಗಳು.

ತನ್ನ ಕುಲದೇವತೆಯ ಸಕಲಾಂಗಗಳನ್ನು ಕುರಿತು ಮಹೋನ್ನತವಾದ ವರ್ಣನಾ ಸ್ತೋತ್ರ ಮಾಂಗೀರಾಷ್ಟಕ ಸಟೀಕ ಕಾವ್ಯ ಮೊದಲಾದ ಗ್ರಂಥಗಳು.

* * * * *

ಈ ಲೇಖನಸಾಮಗ್ರಿ ಸಾರಸ್ವತ ಬ್ರಾಹ್ಮಣ ಜ್ಞಾತಿಗಳ ಐತಿಹಾಸಿಕ ಪುಸ್ತಕಮಾಲಾ ಎಂಬ ಗ್ರಂಥದಿಂದ ಆರಿಸಿಕೊಳ್ಳಲಾಗಿದೆ. ಮಠಸ್ಥ ಗಣೇಶ ರಾಮಚಂದ್ರ ಶರ್ಮಾ, ಖಾನಾಪುರ ಇವರು ಈ ಗ್ರಂಥದ ಸಂಪಾದಕರಾಗಿದ್ದಾರೆ.

* * * * *

# ಮೂರು ಅಂಗುಲದ ಮರ್ಮ

---ಸಂತ ಹರಿಹರಾನಂದ ಸರಸ್ವತಿ.

ಗೋಕುಲದಲ್ಲಿ, ಗೋಪಿಯರು ಯಶೋದಾ ನಂದನ ಕೃಷ್ಣನ ಮೇಲೆ ಪ್ರತಿನಿತ್ಯವೂ ದೂರು ಮಾಡುತ್ತಲೇ ಇದ್ದಾರೆ. ದೂರು ಕೇಳಿ, ಕೇಳಿ ರೋಸಿ ಹೋಗಿದೆ ಯಶೋದೆಗೆ. ತನ್ನ ಪ್ರೀತಿಯ ತುಂಟ ಕೃಷ್ಣನಿಗೆ ಬುದ್ಧಿ ಕಲಿಸಬೇಕೆಂದು ಸಂಕಲ್ಪಿಸುತ್ತಾಳೆ. ಆದರೆ, ಕೈವಲ್ಯಪತಿಯಾದ ಶ್ರೀ ಕೃಷ್ಣನೇ ಅವಳ ಕೈಗೆ ಸರಿಯಾಗಿ ಸಿಗುತ್ತಿಲ್ಲ. ಅವನನ್ನು ಕಟ್ಟಿಹಾಕಿ ಬುದ್ಧಿ ಹೇಳಲು ಸಮಯಕಾಯುತ್ತಿದ್ದಾಳೆ.

ಒಂದು ದಿನ ಯಶೋದೆ, ತನ್ನ ಮನೆಯ ಹಜಾರದಲ್ಲಿ ಕೃಷ್ಣಾ, ಮುಕುಂದ, ಮಾಧವಾ, ವಾಸುದೇವಾ --ಎಂದು ಆ ಪರಮಾತ್ಮನ ದಿವ್ಯ ನಾಮಗಳನ್ನೇ ಹೇಳಿಕೊಳ್ಳುತ್ತಾ, ಮೊಸರು ಕಡೆಯುತ್ತಿದ್ದಾಳೆ. ಅದೂ ಬೆಳಗಿನ ಸಮಯ. ಮೊಸರು ಕಡೆಯಲು ಕುಳಿತರೆ ಅದಕ್ಕೇ ಸಾಕಷ್ಟು ಸಮಯ ಹಿಡಿಯುತ್ತದೆ. ಮನೆಯಲ್ಲಿ ಮಿಕ್ಕ ಕೆಲಸವೂ ಆಗಬೇಕು. ಸಾಲದ್ದಕ್ಕೆ ಮನೆಯ ಅಂಗಳದಲ್ಲಿ ಗೋಪಿಯರು ಸಾಲು ಗಟ್ಟಿ ನಿಂತಿದ್ದಾರೆ. ತುಂಟ ಕೃಷ್ಣನ ಮೇಲೆ ದೂರು ಹೇಳಲು. ಅವರ ಅಹವಾಲನ್ನು ಕೇಳಬೇಕು. ತನ್ನ ಪತಿ ನಂದ ಬರುವುದರೊಳಗೆ ಪಾಕ ಸಿದ್ಧಪಡಿಸಬೇಕು. ಎಷ್ಟೆಲ್ಲ ಕೆಲಸವಿದೆ. ಯೋಚಿಸಿದರೆ ಭಯವಾಗುತ್ತದೆ. ಅಕ್ಕಾ ಯಶೋದಕ್ಕಾ-- ಎಂದು ಹೊರಗಿನಿಂದ ಓರ್ವ ಗೋಪಿ ಕೂಗುತ್ತಾಳೆ. ಅತ್ತ ತಿರುಗಿದ ಯಶೋದೆಯನ್ನು ಕಂಡು "ಕೇಳೇ ಅಕ್ಕಾ ನಿನ್ನ ತುಂಟ ಮಗನ ಗುಣಾವಳಿಗಳನ್ನು ಹೇಳುತ್ತೇನೆ. ಕೇಳು -- ಕೇಳಿ ಸಂತಸಪಡು."

ನಮ್ಮಗೋಕುಲದ ಬೀದಿಯಲ್ಲಿ -- "ಗೋವಿಂದ ಬೇಕೇ -- ಮಾಧವ ಬೇಕೇ, ಕೇಶವ ಬೇಕೇ" ಎಂದು ಕೂಗುತ್ತಾ, ಗಡಿಗೆಯಲ್ಲಿ ಮೊಸರಿಟ್ಟುಕೊಂಡು ದಾರಿಯಲ್ಲಿ ಹೋಗುತ್ತಿದ್ದರೆ -- ನಿನ್ನ ಮಗನಿಗೇನು ಸಂಕಟ? ಆ ನಿನ್ನ ಪೋರ ಕೃಷ್ಣ ಯಾವುದೋ ಮಾಯದಲ್ಲಿ -- ಎಲ್ಲಿಯೋ ಮರೆಯಲ್ಲಿ ನಿಂತು, ಗುರಿ ಇಟ್ಟು ಕಲ್ಲು ಬೀಸಿ ಗಡಿಗೆ ಒಡೆದು ಮೊಸರನ್ನೆಲ್ಲ ಚೆಲ್ಲಿಬಿಟ್ಟ. ನನ್ನ ಗಂಡನಿಗೆ ನಾನೇನು ಉತ್ತರ ಹೇಳಬೇಕು? ಜೀವನ ಮಾಡುವುದೇನು? ಮೊದಲು ನಿನ್ನ ಮುದ್ದು ಬಾಲನಿಗೆ ಬುದ್ಧಿ ಹೇಳು. ನಮ್ಮ ತಂಟೆಗೆ ಬಾರದಂತೆ ಅವನ ಚೇಷ್ಟೆಗಳಿಗೆ ವಿರಾಮ ಹಾಕು ಎಂದು ದೂರುಹೇಳಿ ಅಲ್ಲಿ ನಿಲ್ಲದೆ ಮುನಿಸಿನಿಂದ ಸರಸರ ನಡೆದೇ ಬಿಟ್ಟಳು ಗೋಪಿ. ಈಗ ಸರದಿ ಎರಡನೆಯವಳದು. ಕೇಳೇ ಅಕ್ಕಾ, ಹೀಗೂ ಉಂಟೆ?

"ಏನೋ ಕಷ್ಟಪಟ್ಟು -- ಮೊಸರು ಕಡೆದು ಬೆಣ್ಣೆ ತೆಗೆದು ಗಡಿಗೆಯಲ್ಲಿ ಹಾಕಿ -- ನೆಲುವಿನಲ್ಲಿಟ್ಟಿದ್ದರೆ -- ನಾವೆಲ್ಲ ಮಲಗಿ ನಿದ್ರೆ ಮಾಡುತ್ತಿರುವಾಗ, ರಾತ್ರಿ ಸದ್ದಿಲ್ಲದೆ ಬಂದು ಆ ನಿನ್ನ ಮಗ ಕಳ್ಳತನದಲ್ಲಿ ಬೆಣ್ಣೆಯನ್ನೆಲ್ಲ ತಿಂದು -- ತೇಗಿ, ತನ್ನ ಕಳ್ಳತನ ಬೇರೆಯವರಿಗೆ ಗೊತ್ತಾಗದಿರಲೆಂದೂ, ನನ್ನ ಗಂಡನ ಮುಸುಡಿಗೆ ಬೆಣ್ಣೆಯನ್ನು ಬಳಿದು ಓಡಿಹೋಗಿದ್ದಾನೆ. ನಾನೇ ಬೈದು ಹಿತವಾದ ಹೇಳೋಣವೆಂದರೆ ನನ್ನ ಕೈಗೆಲ್ಲಿ ಸಿಕ್ಕಾನು? ನೋಡಕ್ಕಾ, ಇದು ಕಡೆಯ ಎಚ್ಚರಿಕೆಯಮಾತು -- ಅವನ ಈ ಸಲ್ಲದ ಸಲ್ಲಾಪಕ್ಕೆ ಕಡಿವಾಣ ಹಾಕದಿದ್ದರೆ ನಮಗೆ ಇಲ್ಲಿ ಉಳಿಗಾಲವಿಲ್ಲ ತಿಳಿಯಿತೇ" ಎಂದು ದೂರಿ ಹಿಂದೆಸರಿದಳು. ಹೀಗೆ ಒಂದೇ -- ಎರಡೇ ಇಂತಹವು ನೂರಾರು ದೂರುಗಳನ್ನು ಕೇಳಿ, ಕೇಳಿ -- ಬೇಸತ್ತ ನಂದನಪತ್ನಿ ಯಶೋದೆ ಕೃಷ್ಣನ ಬರವಿಗಾಗಿ ಕಾಯುತ್ತಿದ್ದಾಳೆ. --ಹೊರಗೆಲ್ಲಿಯೋ ಹೋಗಿದ್ದ ಮುದ್ದು ಬಾಲಕೃಷ್ಣನು ಅದೇ ಸಮಯಕ್ಕೆ ಸದ್ದುಮಾಡದೆ ಬಂದು ಅಮ್ಮಾ ಎಂದು ಒಂದು ಗುದ್ದು ಕೊಟ್ಟು ಓಡಲು ಯತ್ನಿಸುವಾಗ -- ಯಶೋದೆಯು ನನ್ನಿಂದ ತಪ್ಪಿಸಿಕೊಂಡು ಮತ್ತೆಲ್ಲಿ ಓಡಿಹೋಗುವೆ ಬಾ. ನಿನಗೆ ಹೊಡೆದು ಬುದ್ಧಿ ಕಲಿಸುತ್ತೇನೆ ಎಂದು ಒಂದು ತುಂಡು ಹಗ್ಗವನ್ನು ತಂದು ಕೃಷ್ಣನನ್ನು ಒಂದು ಕಂಬಕ್ಕೆ ಕಟ್ಟಲು ಪ್ರಯತ್ನಿಸುತ್ತಾ, ಅವನ ಸುತ್ತ ಹಗ್ಗವನ್ನು ಸುತ್ತಿದಾಗ ಅದರಲ್ಲಿ ಮೂರು ಅಂಗುಲ ಕಡಿಮೆ ಇದ್ದು ಸಾಲದೇ ಬರುತ್ತದೆ. ತಾಳು ಬಂದೆ ಎನ್ನುತ್ತ, ಪಕ್ಕದ ಮನೆಗೆ ಓಡಿ ಹೋಗಿ ಗೋಪಿಯನ್ನು ಕೇಳಿ, ಒಂದು ತುಂಡು ಹಗ್ಗವನ್ನು ತಂದು, ತನ್ನ ಮನೆಯ ಹಗ್ಗಕ್ಕೆ ಸೇರಿಸಿ ಮತ್ತೆ ಕಟ್ಟಲು ಹಗ್ಗವನ್ನು ಸುತ್ತಿದಾಗ -- ಮತ್ತೆ ಮೂರು ಅಂಗುಲ ಸಾಲದೇ ಬರುತ್ತದೆ. ಗೋಕುಲದ ಗೋಪಿಯರ ಪ್ರತಿಮನೆಮನೆಯಿಂದ ಹಗ್ಗವನ್ನು ತಂದರು. ಅದರಲ್ಲಿ ಮೂರು ಅಂಗುಲ ಕಡಿಮೆ ಇದ್ದೇ ಇದೆ. ತನ್ನನ್ನು ಕಟ್ಟುವ ಆಟದಲ್ಲಿ ಸಮಯ ಕಳೆಯುತ್ತಿರುವ ಯಶೋದೆಯ ಪೇಚುಕಂಡು ಕೃಷ್ಣ ನಗುತ್ತಿದ್ದಾನೆ. ಲೀಲಾಮೂರ್ತಿಯಾದ ಕೃಷ್ಣನನ್ನು ಕಟ್ಟಲಾರದೆ -- ರೋಸಿದ ಯಶೋದೆಯೂ, ಏನೋ ಕೃಷ್ಣ, ನಿನ್ನ ಮಾಯೆ? ನನಗೊಂದೂ ಅರ್ಥವಾಗುತ್ತಿಲ್ಲ. ನಾನು ಸೋತೆನಪ್ಪಾ, ಇನ್ನು ನನ್ನನ್ನು ಕಾಡಿಸಬೇಡ. ಇದೇನೋ -- "ಮೂರು ಅಂಗುಲದ ಮಹಿಮೆ?" -- ನನಗೆ ಅರ್ಥವಾಗುವಂತೆ ತಿಳಿಯಹೇಳು ಎನ್ನಲು -- ಮುಗುಳುನಗುತ್ತ, ನಂದಕುಮಾರನು -- "ಅಮ್ಮಾ ಹೇಳುವೆ ಕೇಳು. ನನ್ನನ್ನು ಕಟ್ಟಲು ಈ ಹಗ್ಗಗಳಿಂದಾಗದು. ನನ್ನನ್ನು ಪಡೆಯಬಯಸುವವರಿಗೆ ಬಹು ಮುಖ್ಯವಾದ ಅತ್ಯಮೂಲ್ಯವಾದ ಮೂರು ಮೌಲ್ಯಗಳ ಆವಶ್ಯಕತೆ ಇದೆ. ಅವುಗಳನ್ನು ಹೊಂದಿದವರು ಮಾತ್ರವೇ ನನ್ನನ್ನು ಪಡೆಯುತ್ತಾರೆ" ಎಂದ. ಅಂತಹ ಆ ಮೂರು ವಸ್ತುಗಳು ಯಾವುವು? ಎಲ್ಲಿ ದೊರೆಯುತ್ತದೆ? ಹೇಳು! ಎಷ್ಟು ಖರ್ಚಾದರೂ ಸರಿಯೆ -- ಅವುಗಳನ್ನು ತಂದು ನಿನ್ನನ್ನು ಕಟ್ಟಿಹಾಕುತ್ತೇನೆ ಎಂದಳು -- ಏನೋ ಸಾಧಿಸಿಬಿಡುತ್ತೆ ನೆಂಬ ಭರವಸೆಯಲ್ಲಿ -- ಅಮ್ಮಾ ಅವುಗಳು ದಿನಸಿಪದಾರ್ಥಗಳಂತೆ ಎಲ್ಲಿಯೋ ಪೇಟೆಯಲ್ಲಿ ಕೊಂಡು ತರುವ ವಸ್ತುಗಳಲ್ಲ. ಅವು ಪ್ರತಿಯೋರ್ವರಲ್ಲಿಯೂ ಜನ್ಮಾಂತರೀಯ ಸಂಸ್ಕಾರದಿಂದ ಅಂತರ್ಯದಲ್ಲಿ ಪ್ರಕಟವಾಗುವಂತಹವು. ಅವುಗಳೇ -- ನನ್ನನ್ನು ದೊರಕಿಸಿಕೊಡುವ ಸಾಧನಗಳು ಅವೇ "ಜ್ಞಾನ--ಭಕ್ತಿ--ವೈರಾಗ್ಯ" -- ಇವು ಮೂರು ಯಾರಲ್ಲಿ ಇರುತ್ತವೆಯೋ ಅಂತಹವರು ನನ್ನ ಪರಮಾನುಗ್ರಹಕ್ಕೆ ಪಾತ್ರರಾಗುತ್ತಾರೆ. ಎಂದ ಕೃಷ್ಣನ ಮಾತುಕೇಳಿ ಯಶೋದೆ ತನ್ನ ಅಜ್ಞತೆ'ಗೆ ನಾಚಿನೀರಾದಳು.



# ವಾರ್ತಾಲಹರಿ

## ತಿರುಚಾನೂರಿನಲ್ಲಿ ಕೋಟಿ ಕುಂಕುಮಾರ್ಚನೆ

ವಿಶ್ವಶಾಂತಿಗಾಗಿ ತಿರುಚಾನೂರು ಶ್ರೀ ಪದ್ಮಾವತೀ ಅಮ್ಮನವರ ದೇವಾಲಯದಲ್ಲಿ ಜೂನ್ 24 ರಿಂದ ಜುಲೈ 14ರವರೆಗೆ ಅಮ್ಮನವರಿಗೆ ಕೋಟಿ ಕುಂಕುಮಾರ್ಚನೆ ನಡೆಯಿತು.

ಜೂನ್ 24 ರ ಗುರುವಾರ ಬೆಳಗ್ಗೆ ಶ್ರೀ ಪದ್ಮಾವತೀ ಅಮ್ಮನವರನ್ನು ಊರಿನ ರಥಬೀದಿಯಲ್ಲಿ ಮೆರವಣಿಗೆ ಮಾಡಿದ ನಂತರ ದೇವಾಲಯದೊಳಗೆ ನಿರ್ಮಿಸಿದ ಒಂಬತ್ತು ಹೋಮಕುಂಡಗಳಲ್ಲಿ ಹೋಮ ಮಾಡುವುದರಿಂದ ಕುಂಕುಮಾರ್ಚನೆ ಆರಂಭವಾಯಿತು. ಅಖಂಡವಾಗಿ ನಡೆದ ಕೋಟಿಕುಂಕುಮಾರ್ಚನೆಯಲ್ಲಿ ಅಸಂಖ್ಯಾತ ಭಕ್ತರು ಸೇರಿದ್ದರು. ಕುಂಕುಮಾರ್ಚನೆ 21 ದಿನಗಳಕಾಲ ನಡೆದು ಇಡೀ ಕುಂಕುಮಾರ್ಚನೆಯಲ್ಲಿ 5000 ರೂ. ಶುಲ್ಕವನ್ನು ನೀಡಿಯೂ ದಿನವೊಂದಕ್ಕೆ ಐನೂರು ರೂಪಾಯಿ ಶುಲ್ಕ ನೀಡಿಯೂ ಗೃಹಸ್ಥರು ಪಾಲುಗೊಳ್ಳಲು ಅವಕಾಶ ನೀಡಲಾಗಿದ್ದಿತು.

## ಧರ್ಮಕರ್ತರ ಮಂಡಳಿಗೆ ಸನ್ಮಾನ

ಜೂನ್ 25 ರಂದು ಸಂಜೆ ತಿರುಪತಿಯ ತಿ.ತಿ.ದೇ. ಪರಿಪಾಲಕ ಭವನದ ಒಳಾಂಗಣದಲ್ಲಿ ತಿ.ತಿ.ದೇ. ಧರ್ಮಕರ್ತರ ಮಂಡಳಿಯನ್ನು ತಿರುಮಲೆ ತಿರುಪತಿ ದೇವಸ್ಥಾನಗಳ ಸರ್ವಸಂಘಗಳ ಸಮಾಖ್ಯೆ ಸ್ವಾಗತಿಸಿ ಸತ್ಕರಿಸಿತು.

ತಿ. ತಿ. ದೇವಸ್ಥಾನಗಳ ಕಾರ್ಯನಿರ್ವಹಣಾಧಿಕಾರಿ ಶ್ರೀ ಡಿ. ವಿ. ಎಲ್. ಎನ್. ಮೂರ್ತಿ ಅವರ ಅಧ್ಯಕ್ಷತೆಯಲ್ಲಿ ನಡೆದ ಈ ಸ್ವಾಗತ ಸತ್ಕಾರ ಸಮಾರಂಭದಲ್ಲಿ ತಿ.ತಿ.ದೇ. ಮಂಡಳಿಯ ಅಧ್ಯಕ್ಷ ಶ್ರೀ ಎ. ಚೆಂಗಲ್‌ರೆಡ್ಡಿ, ಸದಸ್ಯರು ಶ್ರೀ ರಾಮಾನುಜಂ, ಶ್ರೀಮತಿ ರಾಜೇಶ್ವರೀ ರಾಮಕೃಷ್ಣನ್, ಶ್ರೀ ಶ್ರೀರಾಮಮೂರ್ತಿ, ಶ್ರೀ ಅಗರ್ವಾಲ್, ಶ್ರೀ ಕೃಷ್ಣಾರೆಡ್ಡಿ, ಶ್ರೀ ಶೇಷಗಿರಿರಾವ್, ಶ್ರೀ ಬಾಲರಾಜು, ಶ್ರೀ ಲೋಕನಾಥಂ ಭಾಗವಹಿಸಿದ್ದರು. ಉದ್ಯೋಗಿಗಳ ಸಂಘಗಳ ಸಂಚಾಲಕ ಸಮಿತಿಯ ಶ್ರೀ ಸಿ. ರಮಣ, ಜೆ. ಸಿ. ಎ. ನಾಯಕ ಶ್ರೀ ಚೆಂಗಾರೆಡ್ಡಿಯವರೊಂದಿಗೆ ಸದಸ್ಯರನ್ನು ಜೋಡಿಶಾಲುವಿನೊಂದಿಗೆ ಸತ್ಕರಿಸಿದರು.

## ಧರ್ಮಕರ್ತರ ಮಂಡಳಿಯ ತೀರ್ಮಾನಗಳು

ಜೂನ್ 24, 25 ರಂದು ತಿರುಮಲೆಯಲ್ಲಿ ಸಮಾವೇಶಗೊಂಡ ತಿ.ತಿ.ದೇ. ಧರ್ಮಕರ್ತರ ಮಂಡಳಿಯು ಶ್ರೀ ಎ. ಚೆಂಗಲ್‌ರೆಡ್ಡಿ ಅವರ ಅಧ್ಯಕ್ಷತೆಯಲ್ಲಿ ಹಲವಾರು ನಿರ್ಣಯಗಳನ್ನು ತೆಗೆದುಕೊಂಡಿತು.

ತಿರುಮಲೆಯ ಮಾಧವ ನಗರ ಪ್ರಾಂತ್ಯದಲ್ಲಿ ತಿ.ತಿ.ದೇ. ಸಿಬ್ಬಂದಿಗಾಗಿ ಎಂಬತ್ತು ಲಕ್ಷ ರೂಪಾಯಿಗಳ ಅಂದಾಜು ವೆಚ್ಚದಲ್ಲಿ ವಾಸಗೃಹಗಳನ್ನು ನಿರ್ಮಿಸಬೇಕೆಂದು ತೀರ್ಮಾನಿಸಲಾಯಿತು. ಜೊತೆಗೇ ತಿರುಪತಿಯ ರಾಮನಗರ್ ಪ್ರಾಂತ್ಯದಲ್ಲಿ ಸಿ ಮಾದರಿಯ ವಾಸ ಗೃಹಗಳನ್ನೂ ವಿನಾಯಕನಗರದಲ್ಲಿ ಇ ಮಾದರಿ ವಾಸಗೃಹಗಳನ್ನೂ ನಿರ್ಮಿಸಬೇಕೆಂದು ತೀರ್ಮಾನಿಸಲಾಯಿತು.

ನೇಪಾಳದ ಜನಕಪುರಿ ಯಾತ್ರಾಕ್ಷೇತ್ರದಲ್ಲಿ ತಿ.ತಿ.ದೇ. ಸತ್ರ ನಿರ್ಮಾಣಕ್ಕಾಗಿ ಐವತ್ತು ಲಕ್ಷರೂಗಳನ್ನು ಮಂಜೂರು ಮಾಡಲು ತೀರ್ಮಾನಿಸಲಾಯಿತು.

ತಿ.ತಿ.ದೇ. ಸಹಕಾರಿ ಮಾರಾಟ ಮಳಿಗೆಗೆ ಸೇರಿದ 180 ಉದ್ಯೋಗಿಗಳನ್ನು ತಿ.ತಿ.ದೇ. ಗಳ ಸೇವೆಗೆ ಪಡೆಯಲು ತೀರ್ಮಾನಿಸಲಾಯಿತು. ಆದರೆ ಅವರು ತಿ.ತಿ.ದೇ. ಗಳಲ್ಲಿ ಮತ್ತೆ ಹೊಸ ಉದ್ಯೋಗಿಗಳಾಗುವಂತೆ ಸೇರಿಸಿಕೊಳ್ಳಬೇಕು ಎಂದು ತೀರ್ಮಾನವಾಯಿತು.

ತಿ.ತಿ.ದೇ. ಶಾಲಾಕಾಲೇಜುಗಳಲ್ಲಿ ಕೆಲಸಮಾಡುತ್ತಿರುವ ಅರೆಕಾಲಿಕ ಉಪಾಧ್ಯಾಯರನ್ನು ಹೈಕೋರ್ಟ್ ತೀರ್ಪು ಬರುವವರೆಗೆ ಮಾನವತಾ ದೃಷ್ಟಿಯಿಂದ ಮುಂದುವರಿಸಬೇಕೆಂದು ತೀರ್ಮಾನಿಸಲಾಯಿತು.

ಹೊಸದಾಗಿ ನಿರ್ಮಾಣವಾಗುತ್ತಿರುವ ಬಾಲಾಜಿ ವಿಕಲಾಂಗ ಸಂಕ್ಷೇಮ ಕೇಂದ್ರಕ್ಕೆ ಸೆಂಟ್ರಲ್ ಏರ್ ಕಂಡಿಷನ್ ವ್ಯವಸ್ಥೆಗಾಗಿ ಒಂದು ಕೋಟಿ ಎರಡು ಲಕ್ಷ ರೂಪಾಯಿಗಳನ್ನು ಮಂಜೂರು ಮಾಡಲಾಯಿತು.

ಕಲ್ಯಾಣ ಮಂಟಪಗಳನ್ನು ನಿರ್ಮಿಸಲು ತೀರ್ಮಾನಿಸಿರುವ ಪ್ರಾಂತ್ಯಗಳನ್ನು ಪರಿಶೀಲಿಸಲು ಇಬ್ಬರು ಮಂಡಳಿಯ ಸದಸ್ಯರೊಡನೆ ಐದು ಉಪಸಮಿತಿಗಳನ್ನು ಏರ್ಪಾಡು ಮಾಡಲಾಯಿತು.

ತಿ.ತಿ.ದೇ. ಎಂಜನಿಯರಿಂಗ್ ವಿಭಾಗದಲ್ಲಿನ 50 ವರ್ಕ್ ಇನ್ಸ್‌ಪೆಕ್ಟರ್ ಹುದ್ದೆಗಳನ್ನು ಭರ್ತಿಮಾಡಲು ತೀರ್ಮಾನಿಸಲಾಯಿತು.

ತಿರುಮಲೆಯಲ್ಲಿನ ವಾಯು ವಿದ್ಯುತ್ ಯೋಜನೆಯನ್ನು 22 ಲಕ್ಷರೂಗಳ ವೆಚ್ಚದಲ್ಲಿ ವಿಸ್ತರಿಸಬೇಕೆಂದೂ, ಅನ್ನ ಪ್ರಸಾದಗಳ ನಾಣ್ಯತೆಯನ್ನು ಹೆಚ್ಚಿಸಬೇಕೆಂದೂ ತೀರ್ಮಾನಿಸಲಾಯಿತು.

ಶ್ರೀ ವೆಂಕಟೇಶ್ವರ ಕೇಂದ್ರೀಯ ಗ್ರಂಥಭಂಡಾರದ ಪಾಲಕ ವರ್ಗದಲ್ಲಿ ಮಂಡಳಿಯ ಅಧ್ಯಕ್ಷರೊಂದಿಗೆ ಮತ್ತಿಬ್ಬರು ಸದಸ್ಯರೂ ನಿಯಮಿತರಾಗುವರು. ಅನ್ನಮಾಚಾರ್ಯ ಪ್ರಾಜೆಕ್ಟ್, ದಾಸಸಾಹಿತ್ಯ ಪ್ರಾಜೆಕ್ಟ್ ಕಾರ್ಯಕ್ರಮಗಳ ಸಮೀಕ್ಷೆಗೆ ಉಪಸಮಿತಿಯನ್ನು ನಿಯಮಿಸಲಾಗಿದೆ.

(ಮುಂದಿನ ಪುಟದಲ್ಲಿ ಮುಂದುವರಿದಿದೆ)

(ಹಿಂದಿನ ಪುಟದಿಂದ)

ಅನ್ನದಾನಯೋಜನೆ, ಧರ್ಮಪ್ರಚಾರ ಪರಿಷತ್‌ಗಳ ಸಮೀಕ್ಷೆಗೆ ಉಪಸಮಿತಿಗಳನ್ನು ರಚಿಸಬೇಕೆಂದು ತೀರ್ಮಾನಿಸಲಾಗಿದೆ.

ಶ್ರೀ ಪದ್ಮಾವತೀ ಮಹಿಳಾ ಪಾಲಿಟೆಕ್ನಿಕ್ ಬೋರ್ಡ್ ಸದಸ್ಯರಾಗಿ ಶ್ರೀ ಕೃಷ್ಣಾರೆಡ್ಡಿ ಅವರನ್ನು ನಿಯಮಿಸಿರುವುದಾಗಿದೆ.

ಬಂಗಾರದ ರಥದ ತಯಾರಿಕೆಯ ಕಾರ್ಯಕ್ರಮದಲ್ಲಿ ಪರ್ಯವೇಕ್ಷಣೆಗೆ ಬೋರ್ಡ್ ಸದಸ್ಯೆ ಶ್ರೀಮತಿ ರಾಜೇಶ್ವರೀ ರಾಮಕೃಷ್ಣನ್ ಉಪಸಮಿತಿಯ ಅಧ್ಯಕ್ಷರಾಗಿಯೂ, ತಿ.ತಿ.ದೇ. ಆರ್ಥಿಕ ಸಲಹಾದಾರ ಶ್ರೀ ಸೇತುರಾಮನ್ ಅವರು ಪ್ರತ್ಯೇಕಾಧಿಕಾರಿಯಾಗಿಯೂ ನಿಯಮಿತರಾಗಿದ್ದಾರೆ.

ತಿರುಪತಿಯ ವಿಮಾನ ನಿಲ್ದಾಣದ ಅಭಿವೃದ್ಧಿಗಾಗಿ ಹತ್ತುವರ್ಷಗಳಲ್ಲಿ ಹಿಂದಿರುಗಿಸುವಂತೆ ಆರು ಕೋಟಿ ರೂಪಾಯಿಗಳನ್ನು ಬಡ್ಡಿರಹಿತ ಸಾಲವಾಗಿ ನೀಡಲು ತೀರ್ಮಾನಿಸಲಾಗಿದೆ.

ಈ ನಿರ್ಣಯಗಳ ಬಗ್ಗೆ ತಿ.ತಿ.ದೇ. ಕಾರ್ಯನಿರ್ವಹಣಾಧಿಕಾರಿ ಶ್ರೀ ಡಿ.ವಿ.ಎಲ್. ಎನ್. ಮೂರ್ತಿ ಅವರು ಹಾಗೂ ಹಲವಾರು ಬೋರ್ಡ್ ಸದಸ್ಯರನ್ನು ಒಳಗೊಂಡಂತೆ ನಡೆದ ಪತ್ರಿಕಾಸಮಾವೇಶದಲ್ಲಿ ಅಧ್ಯಕ್ಷ ಶ್ರೀ ಎ. ಚೆಂಗಲ್‌ರೆಡ್ಡಿ ಅವರು ವಿವರಿಸಿದರು.

ತಮಗೆ ಲಭಿಸಿದ ಸ್ವಾಗತಕ್ಕೆ ಪ್ರತಿಸ್ಪಂದಿಸುತ್ತ ಶ್ರೀ ಚೆಂಗಲ್‌ರೆಡ್ಡಿಯವರು ತಿ. ತಿ. ದೇವಸ್ಥಾನಗಳ ಹತ್ತಾರು ಸಂಘಗಳು ಹೀಗೆ ಏಕ ಧಾರೆ ಯಾದದ್ದನ್ನು ಅಭಿನಂದಿಸುತ್ತ ಯಾತ್ರಿಕ ಸೇವೆಯಿಂದಲೇ ಪರಮಾರ್ಥವನ್ನು ಕಾಣುವ ಆದರ್ಶ ನಮ್ಮದಾಗಬೇಕೆಂದೂ, ಉದ್ಯೋಗಿಗಳ ಸಮಸ್ಯೆಗಳನ್ನು ಸೌಹಾರ್ದ, ಶಾಂತವಾತಾವರಣದಲ್ಲಿ ಪರಿಷ್ಕರಿಸಿಕೊಳ್ಳಬಹುದೆಂದೂ ನುಡಿಯುತ್ತ, ತಿ.ತಿ.ದೇ. ಸಿಬ್ಬಂದಿ ಯಾತ್ರಿಕರ ಬಗ್ಗೆ ಗೌರವಾದರಗಳನ್ನು ತೋರಿಸಿ ನಡೆಯಬೇಕೆಂದು ಕರೆನೀಡಿದರು.

ಶ್ರೀಮತಿ ರಾಜೇಶ್ವರೀ ರಾಮಕೃಷ್ಣನ್ ಮಾತನಾಡುತ್ತ ದೇವರ ಆದಾಯದ ಬಗ್ಗೆ ತಮಗೆಲ್ಲ ಗೌರವ ಭಾವವಿದೆಯೆಂದೂ, ತಾವುಗಳೆಲ್ಲ ಸಾರ್ವಜನಿಕ ಕ್ಷೇತ್ರದಿಂದ ಬಂದವರೇ ಆಗಿದ್ದು ತಮಗೆಲ್ಲ ಉಳಿತಾಯದ, ಉತ್ಪಾದನಾ ವೆಚ್ಚದ, ಇನ್ನೂ ಮುಂತಾದ ಆರ್ಥಿಕ ವ್ಯವಹಾರಗಳ ಬಗ್ಗೆ ಖಚಿತವಾದ ಅಭಿಪ್ರಾಯಗಳಿರುವುದಾಗಿ ತಿಳಿಸಿದರು. ತಾವು ಕಾರ್ಮಿಕ ಸಮಸ್ಯೆಗಳನ್ನು ಕೂಲಂಕಷವಾಗಿ ತಿಳಿದಿರುವುದಾಗಿ ವಿವರಿಸಿದ ಶ್ರೀ ರಾಮಾನುಜನ್ (ಕಾರ್ಮಿಕ ನಾಯಕರೇ ಆದವರು) ಕಾರ್ಮಿಕರು ತಮ್ಮ ಸಮಸ್ಯೆಗಳ ಪರಿಷ್ಕಾರದ ಬಗ್ಗೆ ನಿಶ್ಚಿಂತರಾಗಿರಬೇಕೆಂದು ಭರವಸೆ ನೀಡಿದರು. ಶ್ರೀ ಶ್ರೀರಾಮಮೂರ್ತಿ ಅವರು ಮಾತನಾಡುತ್ತ ತಾವು ತಿ. ತಿ. ದೇವಸ್ಥಾನಗಳ ಮಾಜೀ ಉದ್ಯೋಗಿಯೇ ಆಗಿದ್ದು ಉದ್ಯೋಗಿಗಳ ಸಮಸ್ಯೆಗಳು ಸಂತಸಗಳು ಎಲ್ಲವನ್ನೂ ತಿಳಿದಿರುವುದಾಗಿ ವಿವರಿಸಿದರು. ಮಿಕ್ಕ ಬೋರ್ಡ್ ಸದಸ್ಯರೂ ಮಾತನಾಡಿದರು.

ಸಂಚಾಲನ ಸಮಿತಿಯ ಶ್ರೀ ಸಿ. ರಮಣ ಮಾತನಾಡುತ್ತ ಅಧ್ಯಕ್ಷರು ಉತ್ತಮ ಮಾನವತಾವಾದಿ ಎಂದೂ, ಅವರ ನೇತೃತ್ವದಲ್ಲಿ ತಿ. ತಿ. ದೇವಸ್ಥಾನಗಳ ಕೇವಣಿಗಳು ಇತ್ತೋಪ್ಯತಿಶಯವಾಗಿ ಬೆಳೆಯುವುದೇ ಅಲ್ಲದೆ ಯಾತ್ರಿಕ ಸೌಕರ್ಯಗಳು ಹೆಚ್ಚಿ, ಉದ್ಯೋಗಿಗಳಿಗೆ ಕೆಲಸಮಾಡಲು ಉತ್ತಮವಾದ ವಾತಾವರಣ ಏರ್ಪಡುವುದೆಂದು ತಮ್ಮ ಆಶಯವನ್ನು ವ್ಯಕ್ತಪಡಿಸಿದರು. ಜೆ. ಸಿ. ಎ. ನಾಯಕರು ಶ್ರೀ ಚೆಂಗಾರೆಡ್ಡಿ ಮಾತನಾಡುತ್ತ ಈ ಧರ್ಮಕರ್ತರ ಮಂಡಳಿ ಎಲ್ಲ ರಂಗಗಳಲ್ಲಿಯೂ ನಿಷ್ಣಾತರಾದವರಿಂದ ಕೂಡಿದ್ದು, ಸಿಬ್ಬಂದಿ ಸಮಸ್ಯೆ, ಮೂಲಧನ ವಿಷಯಗಳು, ಯಾತ್ರಿಕ ಸೌಕರ್ಯ, ಮುಂತಾದ ಎಲ್ಲ ವಿಷಯಗಳಲ್ಲೂ ತಕ್ಕ ಅವಗಾಹನೆ ಹೊಂದಿ ಕೆಲಸಮಾಡುವ ಸಾಧ್ಯತೆಯನ್ನು ಕುರಿತು ಮಾತನಾಡಿದರು.

ತಿ. ತಿ. ದೇವಸ್ಥಾನಗಳ ಕಾರ್ಯನಿರ್ವಹಣಾಧಿಕಾರಿ ಶ್ರೀ ಡಿ. ವಿ. ಎಲ್. ಎನ್. ಮೂರ್ತಿಯವರು ಧರ್ಮಕರ್ತರ ಮಂಡಳಿ ಹಾಗೂ ಉದ್ಯೋಗಿಗಳು ಒಂದಾಗಿ ತಿರುಪತಿಯ ಯಾತ್ರಿಕಾವಸರಗಳನ್ನು ತಿಳಿದು ಸಮರ್ಪಣಾಭಾವದಿಂದ ಕೆಲಸ ಮಾಡಿ ಹೆಸರು ಪಡೆಯಬೇಕೆಂದು ಹಾರೈಸಿದರು.

## ತಿ. ತಿ. ದೇ. ಉದ್ಯೋಗಿಗಳಿಗೆ ಧ್ಯೇಯೋಪಯೋಗಿ ತರಗತಿಗಳು

ತಿರುಮಲೆಗೆ ನಿತ್ಯವೂ ದೂರದೂರುಗಳಿಂದ ಬರುವ ಯಾತ್ರಿಕರ ಬಗ್ಗೆ ಯಾವರೀತಿಯಲ್ಲಿ ನಡೆಯಬೇಕು, ಅವರಿಗೆ ಯಾವರೀತಿಯಲ್ಲಿ ಸೇವೆಗೈಯ್ಯಬೇಕು ಎಂಬ ಬಗ್ಗೆ ತಿ.ತಿ.ದೇ. ಸಿಬ್ಬಂದಿಗೆ ಅವಗಾಹನೆಯನ್ನುಂಟುಮಾಡಲು ಧ್ಯೇಯೋಪಯೋಗಿ ಶಿಕ್ಷಣವನ್ನು ನೀಡುವ ರಿಫ್ರೆಷರ್ ಕೋರ್ಸ್‌ಗಳನ್ನು ನಡೆಸುವ ಅಗತ್ಯವಿದೆ ಎಂಬುದು ತಮ್ಮ ಅಭಿಪ್ರಾಯವಾಗಿದೆ ಎಂದು ಧರ್ಮಕರ್ತರ ಮಂಡಳಿಯ ಅಧ್ಯಕ್ಷ ಶ್ರೀ ಎ. ಚೆಂಗಲ್‌ರೆಡ್ಡಿ ಪತ್ರಿಕಾ ಪ್ರತಿನಿಧಿಗಳೊಡನೆ ಮಾತನಾಡುತ್ತ ತಿಳಿಸಿದರು.

ಅದಕ್ಕಾಗಿ ಸಿಬ್ಬಂದಿಗೆ ಧ್ಯೇಯೋಪಯೋಗಿ ತರಬೇತಿ ನೀಡಲು ನಾಡಿನ ಪ್ರಮುಖ ಅಧ್ಯಾತ್ಮವಿದರು, ಸೇವಾಕೋವಿದರನ್ನು ಹಿರಿಯನ್ನು ಕರೆಯಿಸುವುದಾಗಿ ಅವರು ತಿಳಿಸಿದರು.

## ತಿರುಮಲೆಯಲ್ಲಿ ಪ್ರಧಾನಮಂತ್ರಿ

ಭಾರತದ ಪ್ರಧಾನಮಂತ್ರಿ ಶ್ರೀ ಪಿ. ವಿ. ನರಸಿಂಹರಾವ್ ಅವರು ತಿರುಮಲೆಯಲ್ಲಿನ ಶ್ರೀ ವೆಂಕಟೇಶ್ವರಸ್ವಾಮಿಯನ್ನು ಜುಲೈ 2 ರಂದು ಸಂದರ್ಶಿಸಿ ಆರಾಧಿಸಿದರು.

ಆಂಧ್ರಪ್ರದೇಶದ ಮುಖ್ಯಮಂತ್ರಿ ಶ್ರೀ ವಿಜಯ ಭಾಸ್ಕರರೆಡ್ಡಿ ಅವರೊಡನೆ ತಿರುಮಲೆಯ ದೇವಾಲಯದ ಮಹಾದ್ವಾರಕ್ಕೆ ಬಂದ ಪ್ರಧಾನಿಯವರನ್ನು ದೇವಾಲಯ ಮರ್ಯಾದೆಗಳೊಂದಿಗೆ ಸ್ವಾಗತಿಸಲಾಯಿತು.

ಆಂಧ್ರಪ್ರದೇಶದ ಮಾಜಿ ಮುಖ್ಯಮಂತ್ರಿ ಶ್ರೀ ಜನಾರ್ದನರೆಡ್ಡಿ, ಹಾಲಿ ಮಂತ್ರಿಗಳು ಶ್ರೀ ಸಮರಸಿಂಹರೆಡ್ಡಿ, ಶ್ರೀ ದಿವಾಕರ ರೆಡ್ಡಿ, ಶ್ರೀ ಕೋನೇರು ರಂಗರಾವ್, ತಿ.ತಿ.ದೇ. ಅಧ್ಯಕ್ಷ ಶ್ರೀ ಎ. ಚೆಂಗಲ್ ರೆಡ್ಡಿ, ಕಾರ್ಯನಿರ್ವಹಣಾಧಿಕಾರಿ ಶ್ರೀ ಡಿ.ವಿ.ಎಲ್. ಎನ್. ಮೂರ್ತಿ ಮೊದಲಾದವರು ಪ್ರಧಾನಮಂತ್ರಿಗಳೊಡನೆ ದೇವಾಲಯವನ್ನು ಸೇರಿದರು.

ಪ್ರಧಾನಮಂತ್ರಿಗಳಿಗೆ ಗೌರವಸೂಚಕವಾಗಿ ಪೆದ್ದಜೆಯ್ಯಂಗಾರರು ಸ್ವಾಮಿ ಶೇಷ ವಸ್ತ್ರವನ್ನು ನೀಡಿದರು. ಅವರಿಗೆ ದೇವರ ಪ್ರಸಾದಗಳನ್ನು ನೀಡಿ, ವೇದಾಶೀರ್ವಚನ ನೀಡಲಾಯಿತು. ದೇವಾಲಯದಲ್ಲಿ ಸುಮಾರು ಮೂವತ್ತು ನಿಮಿಷಕಾಲವಿದ್ದ ಪ್ರಧಾನಮಂತ್ರಿಗಳು ವಿಶೇಷ ಆಭರಣ, ಕಿರೀಟಗಳಿಂದ ಅಲಂಕೃತವಾದ ಸ್ವಾಮಿಯನ್ನು ಭಕ್ತಿ ಶ್ರದ್ಧೆಗಳಿಂದ ಆರಾಧಿಸಿದರು.

# ಶ್ರೀ ವೆಂಕಟೇಶ್ವರ ವನಾಭಿವೃದ್ಧಿ ಯೋಜನೆ

ಭೂಮಿಯ ಒಂದು ವಿಶಿಷ್ಟ ಗುಣ ಇಲ್ಲಿನ ಹಸಿರು. ಗಿಡವಾಗಿ, ಮರವಾಗಿ, ವನವಾಗಿ, ಕಾಡಾಗಿ ಮನುಷ್ಯನ ಜೊತೆಗೇ ಬೆಳೆದು, ಭೂಮಿಯ ಮೇಲಿನ ಮನುಷ್ಯನ ಇರವನ್ನು ಅರ್ಥಪೂರ್ಣ ಆಗಿಸಿರುವುದು ಹಸಿರು. ತಿರುಮಲೆಯ ಕಾಡುಗಳು ಶ್ರೀ ವೆಂಕಟೇಶ್ವರಸ್ವಾಮಿಯ ಸೇವೆಯಲ್ಲಿ ಪರಂಪರೆಯಿಂದ ನೀರುನೆರಳಿನ ತಾಣವಾಗಿ ಪ್ರಸಿದ್ಧಿ ಪಡೆದದ್ದುಂಟು. ಅಂತಹ ಹಿರಿಮೆಯ ಪರಿಸರವನ್ನು ರಕ್ಷಿಸಲು 1981 ರಲ್ಲಿ 25 ಲಕ್ಷ ವೃಕ್ಷಗಳನ್ನು ಬೆಳೆಸುವ ವನಸಂರಕ್ಷಣೆಯ ಕಾರ್ಯಕ್ರಮವನ್ನು ಕೈಗೆತ್ತಿಕೊಳ್ಳಲಾಯಿತು. ಅದರ ಯಶಸ್ವಿ ಅನುಷ್ಠಾನದಿಂದ ಸ್ಫೂರ್ತವಾಗಿ ಹಲವಾರು ವನಾಭಿವೃದ್ಧಿ ಕಾರ್ಯಕ್ರಮಗಳನ್ನು ಹಮ್ಮಿಕೊಂಡು ಸರ್ವಜನಿಕರನ್ನೂ ಈ ಪರಿಸರ ಪರಿರಕ್ಷಣೆಯ ಪವಿತ್ರಕಾರ್ಯವಲ್ಲಿ ಪಾಲುಗೊಳ್ಳಲು ಯೋಜನೆಗಳನ್ನು ರೂಪಿಸಲಾಗಿದೆ. ಅವುಗಳಲ್ಲಿ ಹಲವು ಈ ರೀತಿ ಇವೆ.

## ವೃಕ್ಷ ಸಂವರ್ಧನ ಯೋಜನೆ :

ಒಂದು ಎಕರೆ ಸ್ಥಳದಲ್ಲಿ ರೂ. 15,000 ರೂಪಾಯಿ ನೀಡಿದವರ ಹೆಸರಿನಲ್ಲಿ ಉಪವನವನ್ನು ಬೆಳೆಸಲಾಗುವುದು. ದಾನಿಗಳಿಗೆ ಹತ್ತು ವರ್ಷಗಳಕಾಲ ಪ್ರತಿವರ್ಷದಲ್ಲಿ ಎರಡು ದಿನ ತಿರುಮಲೆಯಲ್ಲಿ ಉಚಿತ ವಸತಿ ನೀಡಿ ಅವರಿಗೆ ಈ ಕಾಲದಲ್ಲಿ 5 ಮಂದಿಗೆ ಉಚಿತ ವಿಶೇಷ ಪ್ರವೇಶದ ದರ್ಶನಾವಕಾಶ ನೀಡಲಾಗುವುದು.

## ವೃಕ್ಷ ಪ್ರಸಾದ :

ಪ್ರತಿವರ್ಷವೂ ನೂರು ಹೂ ಹಣ್ಣು ಬಿಡುವ ಸಸಿಗಳನ್ನು ಬೆಳೆಸುವ ಈ ಯೋಜನೆಯಲ್ಲಿ ದಾನಿಗಳ ಹೆಸರಿನಲ್ಲಿ ಪ್ರತಿವರ್ಷವೂ ನೂರು ಗಿಡಗಳನ್ನು ವಿತರಣೆ ಮಾಡಲಾಗುವುದು. ಹತ್ತು ಸಾವಿರ ರೂಪಾಯಿಗಳ ದಾನದಿಂದ ಈ ಯೋಜನೆಯಲ್ಲಿ ಪಾಲುಗೊಳ್ಳುವ ದಾನಿಗಳಿಗೆ ಪ್ರತಿವರ್ಷವೂ ಎರಡುದಿನ ತಿರುಮಲೆಯಲ್ಲಿ ಉಚಿತ ವಸತಿ 5 ಮಂದಿಗೆ ಉಚಿತ ವಿಶೇಷ ಪ್ರವೇಶದ ದರ್ಶನಾವಕಾಶ ನೀಡಲಾಗುವುದು.

## ಸ್ಮಾರಕ ವನ :

ಒಂದೆಡೆ ಹತ್ತು ಮರಗಳನ್ನು 5 ವರ್ಷ ನೋಡಿಕೊಳ್ಳುವ ಈ ಯೋಜನೆಯಲ್ಲಿ 2000 ರೂ. ಗಳನ್ನು ನೀಡುವ ದಾನಿಗಳ ಹೆಸರನ್ನೆ ಈ ತರುಸಮೂಹಕ್ಕೆ ನೀಡಲಾಗುವುದು. ಐದು ವರ್ಷಗಳ ಕಾಲ ವರ್ಷಕ್ಕೆ ಒಮ್ಮೆ 5 ಮಂದಿಗೆ ವಿಶೇಷ ಪ್ರವೇಶದ ದರ್ಶನಾವಕಾಶ ನೀಡಲಾಗುವುದು.

## ವನಸಂರಕ್ಷಣ ಭಾಗಸ್ವಾಮ್ಯ :

ಏಳು ಬೆಟ್ಟಗಳ ವನಾಚ್ಛಾದನೆಯನ್ನು ಸಂರಕ್ಷಿಸುವ ಉದ್ದೇಶದ ಈ ಯೋಜನೆಯಲ್ಲಿ 1000 ರೂ.ಗಳ ದಾನದಿಂದ ಪಾಲುಗೊಳ್ಳಬಹುದು. ದಾನಿಗಳ ಹೆಸರನ್ನು ಮುಖ್ಯವಾಗಿ ಪ್ರದರ್ಶಿಸಲಾಗುವುದು. ಅವರ ಐದು ಮಂದಿಗೆ ಒಂದು ವರ್ಷ ವಿಶೇಷ ಪ್ರವೇಶದಲ್ಲಿ ದರ್ಶನಾವಕಾಶ ನೀಡಲಾಗುವುದು.

## ಅಧ್ಯಯನ ವನಗಳು :

ಸಸ್ಯವನದಲ್ಲಿ ಒಂದು ಬಗೆಯ ಸಸ್ಯದ ವಿಶೇಷ ಆರೈಕೆ ಮಾಡಲಾಗುವುದು. ಸಸ್ಯದ ಬಳಿ ದಾನಿಯ ಹೆಸರಿನ ಫಲಕವಿಡಲಾಗುವುದು. ಇದಕ್ಕೆ ದಾನ ನೀಡಬೇಕಾದ ಮೊತ್ತ ರೂ. 500/--

## ವೃಕ್ಷ ದತ್ತತೆ :

ತಿರುಮಲೆಯ ಹಾದಿಯಲ್ಲೂ ಬೀದಿಬದಿಗಳಲ್ಲೂ ವೃಕ್ಷಗಳನ್ನು ಬೆಳೆಸುವ ಈ ಯೋಜನೆಯಲ್ಲಿ 250 ರೂ. ನೀಡಿದವರ ಹೆಸರನ್ನು ಮರದ ಬಳಿ ಫಲಕದಲ್ಲಿ ಪ್ರದರ್ಶಿಸಲಾಗುವುದು.

ತಿರುಮಲೆಯ ಅರಣ್ಯವು ನಮ್ಮ ಪರಂಪರೆಯ ಕೊಡುಗೆಯಾಗಿದ್ದು ಅದನ್ನು ರಕ್ಷಿಸಿ ಮುಂದಿನ ಪೀಳಿಗೆಗೆ ತಲುಪಿಸುವ.

ದಶಕೂಪ ಸಮೋವಾಪಿ ದಶವಾಪಿ ಸಮೋ ಹ್ರದ
ದಶ ಹ್ರದ ಸಮಃ ಪುತ್ರ ದಶಪುತ್ರ ಸಮೋ ದ್ರುಮ

ಹತ್ತು ಬಾವಿಗಳು ಒಂದು ಕೆರೆಗೂ, ಹತ್ತು ಕೆರೆಗಳು ಒಂದು ಸರೋವರಕ್ಕೂ, ಹತ್ತು ಸರೋವರಗಳು ಒಬ್ಬ ಮಗನಿಗೂ, ಹತ್ತು ಗಂಡುಮಕ್ಕಳು ಒಂದು ತರುವಿಗೂ ಸಮ.

ದಯವಿಟ್ಟು ಈ ಉದಾತ್ತ ಯೋಜನೆಗಳಲ್ಲಿ ಭಾಗಿಗಳಾಗಬೇಕೆಂದು ಭಕ್ತ ಬಂಧುಗಳಲ್ಲಿ ವಿನಂತಿಸಲಾಗಿದೆ.

ತಮ್ಮ ದಾನಗಳನ್ನು ಕಳುಹಿಸಬೇಕಾದ ವಿಳಾಸ :

**ಕಾರ್ಯನಿರ್ವಹಣಾಧಿಕಾರಿ,**

ತಿ. ತಿ. ದೇವಸ್ಥಾನಗಳು,

ತಿರುಪತಿ -- 517 507.

# ಮುಂದಿನ ಸಂಚಿಕೆಯಲ್ಲಿ

## ಸಪ್ತಗಿರಿ --- ಸೆಪ್ಟಂಬರ್ 1993

**ರುದ್ರಾಕ್ಷದ ಹಿರಿಮೆ**

--ರಘುಸುತ

**ಸಂಕಷ್ಟ ಚತುರ್ಥಿ**

--ಆರ್. ಜಿ. ಶಾನಭಾಗ

**ಕಲ್ಲಹಳ್ಳಿಯ ಶ್ರೀನಿವಾಸ**

--ಜಿ. ಎಸ್. ಗುಂಡಪ್ಪ

**ಗಣಪತ್ಯಥರ್ವಶೀರ್ಷ**

--ಆ. ಚಿ. ಜ್ಯೋತಿಷೀ

**ತಿರುಪತಿಯ ಸುತ್ತ ಮುತ್ತ**

--ರುಕ್ಮಿಣೀ ಗಿರಿಮಾಜಿ.

**ಜೊತೆಗೇ ಆಕರ್ಷಕವಾದ ಮತ್ತೂ ಹಲವಾರು ಸಾಮಯಿಕ ಲೇಖನಗಳು**

**ತಮ್ಮ ಪ್ರತಿಯನ್ನು ಇಂದೇ ಕಾದಿರಿಸಿ.**

---

ಸೂಚನೆ : ಸಪ್ತಗಿರಿ ವಾರ್ಷಿಕ ಚಂದಾ ಇಪ್ಪತ್ನಾಲ್ಕು ರೂಪಾಯಿ ಮಾತ್ರ. ತಮ್ಮ ಚಂದಾ ಹಣವನ್ನು ಎಂ. ಓ. ಡಿ. ಡಿ. ಯ ಮೂಲಕ ಸಂಪಾದಕರು, ಸಪ್ತಗಿರಿ, ತಿ.ತಿ.ದೇ. ತಿರುಪತಿ -- ಇವರಿಗೆ ಕಳುಹಿಸಿ. ವಿಳಾಸವನ್ನು ಸ್ಪಷ್ಟವಾಗಿ ಬರೆಯಿರಿ ಎಂದು ವಿನಂತಿ.



# ತಿಂಗಳಿನ ಮುಖ್ಯದಿನಗಳು

## ಸೆಪ್ಟಂಬರ್ --- 1993

| | |
|---|---|
| 17--9--93 ಶುಕ್ರವಾರ | ಬಲರಾಮ ಜಯಂತಿ. |
| 18--9--93 ಶನಿವಾರ | ವರಾಹ ಜಯಂತಿ.<br>ತಿರುಮಲೆಯಲ್ಲಿ ಬ್ರಹ್ಮೋತ್ಸವ ಧ್ವಜಾರೋಹಣ. |
| 19--9--93 ಭಾನುವಾರ | ವಿನಾಯಕ ಚೌತಿ. |
| 22--9--93 ಬುಧವಾರ | ತಿರುಮಲೆಯಲ್ಲಿ ಗರುಡೋತ್ಸವ. |
| 25--9--93 ಶನಿವಾರ | ತಿರುಮಲೆಯಲ್ಲಿ ರಥೋತ್ಸವ. |
| 26--9--93 ಭಾನುವಾರ | ತಿರುಮಲೆಯಲ್ಲಿ ಬ್ರಹ್ಮೋತ್ಸವದ ಅವಭೃಥ. |
| 27--9--93 ಸೋಮವಾರ | ವಾಮನ ಜಯಂತಿ. |
| 28--9--93 ಬುಧವಾರ | ಅನಂತ ಪದ್ಮನಾಭವ್ರತ. |




Edited and published on behalf of T.T. Devasthanams by K. Subba Rao, M.A., and Printed at T.T.D. Press by M. Vijayakumar Reddy, Manager, T.T.D. Press, Tirupati - 517 507

TIRUMALA TIRUPATI DEVASTHANAMS

# Sri Venkateswara Vanabhivriddhi Scheme

## An Appeal . . .

*He that planteth a tree is the servant of God*
*And Provideth a kindness for many generation*
*And faces that he, hath not seen shall bless him*

Sacred Forests of Tirumala are the precious gift of Lord Venkateswara to mankind. With a view to safeguarding its unique yet delicate ecological condition, Tirumala Tirupati Devasthanams have introduced a series of exciting schemes called **Sri Venkateswara Vanabhivriddhi Schemes.** The Schemes seek to provide a rare opportunity to the public for participation in a massive plantation project implemented by the Forest Department of T.T. Devasthanams.

The salient features of Sri Venkateswara Vanabhivriddhi Schemes are:

**VRIKSHA SAMVARDHANAM :** Under this Scheme, about one acre of land will be brought under plantation

**Benefits :**

- Plantation will be named after the donor or person of his choice.
- Every year free accommodation on 2 ordinary days at Tirumala for 10 years
- One paid special darshan every year for 5 persons for 10 years

**Donation :** Rs 15,000.

**VRIKSHA PRASADAM :** The Scheme is proposed for raising 100 fruit and flowering seedling every year.

**Benefits :**

- Distribution of one hundred seedlings, both fruit bearing and flowering in the donor's name every year.
- Two days free stay at Tirumala every year on any ordinary days for 10 years.
- One paid special darshan every year for five persons for 10 years.

**Donation :** Rs. 10,000.

**SMARAKA VANALU :** Under this scheme 10 saplings of selected species will be planted in a grove and maintained for five years.

**Benefits :**

- The grove will be named after the donor.
- Every year paid special darshan for five persons for five years.

**Donation :** Rs. 2,000.

**VANA SAMRAKSHANA BHAGA SWAMYAM :** is proposed to protect and improve the natural forest cover on Tirumala hills.

**Benefits :**

- Diplay of the donor's name.
- Paid special darshan for five persons for one year.

**Donation :** Rs. 1,000.

**ADHYAYANA VANALU :** Plantation and maintenance of a variety of species will be taken up under this scheme in the proposed botonical garden at Tirumala.

**Benefits :**

- Display of donor's name near the plant.

**Donation :** Rs. 500.

**VRIKSHA DATTATA :** is a bold scheme featuring adoption and plantation of avenue trees on the ghat road and at Tirumala.

**Benefits :**

- Display of donor's name.

**Donation :** Rs. 250.

We appeal to all devotees to donate liberally and help us to preserve the priceless forest wealth of Tirmala - The Abode of LORD VENKATESWARA.

Please send your donations by Demand draft to the **The Executive Officer, T. T. Devasthanams, TIRUPATI - 517 507.**

EXECUTIVE OFFICER

